# ಮಧುರ ಮೋಹನ

ಪದ್ಮಾ ಶ್ರೀಧರ್

ಮಂಜುಶ್ರೀ ಪ್ರಕಾಶನ
16 ನೇ ಮೇಯಿನ್, ಕಾಮಾಕ್ಷಿ ಆಸ್ಪತ್ರೆ ರಸ್ತೆ,
ಸರಸ್ವತಿಪುರಂ, ಮೈಸೂರು 570009

MADHURA MOHANA- A social novel by Smt. Padma Shreedhar, and published by M/S MANJUSHREE PRAKASHANA, 16th Main, Behind Kuvempu High School, Kamakshi Hospital Road, Saraswathipuram, Mysore 570009.

First publication: 2000.
ISBN-81-86675-10-8


Price: Rs.48/-

D. T. P: KUM. LATHA,
KANIVE COMPUTERS,
MYSORE-9

Impression at:

# ಲೇಖಕಿಯ ಮಾತು

' ಮಧುರ-ಮೋಹನ ' ನಾನು ಬರೆದ ಮೊದಲ ಕಾದಂಬರಿ. 'ಮಂಗಳಾ' ಮಾಪತ್ರಿಕೆಯಲ್ಲಿ ಇತ್ತೀಚೆಗೆ ಧಾರಾವಾಹಿಯಾಗಿ ಪ್ರಕಟಗೊಂಡಿತು. ಅಪಾರ ಮೆಚ್ಚುಗೆಯನ್ನೂ, ಪ್ರಶಂಸೆಯನ್ನೂ ಗಳಿಸಿತು. ಸರಳ ಸನ್ನಿವೇಶಗಳನ್ನೊಳಗೊಂಡ, ಸುಂದರ ಸಾಂಸಾರಿಕ ಚಿತ್ರಣವೆಂದು ಅಭಿಮಾನದಿಂದ ಹೊಗಳಿ ಬರೆದ ಪತ್ರಗಳನ್ನು ಓದಿ ನನ್ನ ಪ್ರಯತ್ನಕ್ಕೆ ಪುರಸ್ಕಾರ ದೊರಕಿತೆಂದು ಸಂತೋಷವಾಯಿತು.

ಓದುಗರಿಗೆ ನನ್ನ ಬರಹವನ್ನು ತಲುಪಿಸಿ, ಅವರ ಅಭಿನಂದನೆಯನ್ನು, ಮೆಚ್ಚುಗೆಯನ್ನು ಪಡೆಯಲು ಕಾರಣರಾದ, 'ಮಂಗಳಾ' ವಾರಪತ್ರಿಕೆಯ ಸಂಪಾದಕರಾದ ಶ್ರೀ ಬಾಬು ಕೃಷ್ಣಮೂರ್ತಿಯವರಿಗೂ, ಹಾಗೂ 'ಮಂಗಳಾ' ಪಬ್ಲಿಕೇಷನ್ಸ್‌ನ ಸದಸ್ಯರೆಲ್ಲರಿಗೂ ಈ ಮೂಲಕ ನನ್ನ ಕೃತಜ್ಞತೆಗಳನ್ನೂ ತಿಳಿಸುತ್ತೇನೆ.

ಇದೀಗ ' ಮಧುರ–ಮೋಹನ ' ಕಾದಂಬರಿಯನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು, ಮೈಸೂರಿನ ಮಂಜುಶ್ರೀ ಪ್ರಕಾಶನದವರು ಆಸಕ್ತಿಯಿಂದ ಒಪ್ಪಿಕೊಂಡಿದ್ದಾರೆ. ಪ್ರಕಾಶಕರಿಗೆ ಹಾಗೂ ಅವರ ಬಳಗದವರೆಲ್ಲರಿಗೂ ನನ್ನ ಕೃತಜ್ಞತೆಗಳು.

ಮತ್ತೊಮ್ಮೆ ಅಭಿಮಾನಿ ಓದುಗರಿಗೆ ನನ್ನ ವಂದನೆಗಳು.

ಇತಿ ತಮ್ಮ ವಿಶ್ವಾಸಿ
ಪದ್ಮಾ ಶ್ರೀಧರ್

೫–೪–೨೦೦೦
ಮೈಸೂರು

ಶ್ರೀ

## ಸಮರ್ಪಣೆ

ಗಣಪಗೆ ವಂದಿಸಿ, ವಾಣಿಯ ಸ್ಮರಿಸಿ,
"ಶ್ರೀನಿವಾಸ"ನಿಗೆ ಈ ಕೃತಿಯ ಅರ್ಪಿಸಿ,
ವರವ ನೀಡೆಂದು ಬೇಡುತ ಸ್ತುತಿಸಿ,
ಚರಣ ಪದ್ಮಕೆ ಎರಗುವೆನು ನಮಿಸಿ.

—ಪದ್ಮಾಶ್ರೀಧರ್

# ಮಧುರ ಮೋಹನ

"ಮೋನಿ, ಮೋನಿ" ಮಲಗಿದ್ದವನನ್ನು ಭವಾನಮ್ಮ ಕರೆದು ಎಬ್ಬಿಸಿದಾಗ, ಅಸಹನೆಯಿಂದ ಅವನು ಪ್ರಶ್ನಿಸಿದ.

"ಏನಮ್ಮಾ.... ಅದು?"

"ಸ್ವಲ್ಪ ಅಂಗಡಿಗೆ ಹೋಗಿ ಬರಬೇಕಾಗಿತ್ತಲ್ಲೊ......"

"ಈಗ? ಬೆಳಗ್ಗೇನೇ ಹೇಳಬಾರದಾಗಿತ್ತೆ!" ಬೇಜಾರಿನಿಂದ ನುಡಿದ.

"ಏನ್ಮಾಡಲೋ? ದ್ರಾಕ್ಷಿ ಗೋಡಂಬಿ ಇದೆ ಅಂತ ತಿಳಿದುಕೊಂಡಿದ್ದೆ. ಈಗ ನೋಡಿದರೆ ಇಲ್ಲವೇ ಇಲ್ಲ. ಯಾರೋ ತಿಂದು ಹಾಕಿದಾರೆ."

"ನಾನಂತೂ ಅಲ್ಲ" ಮತ್ತೆ ಮಲಗಲು ಪ್ರಯತ್ನಿಸಿದವನನ್ನು ಮತ್ತೆ ಕೇಳಿದಳು.

"ಈಗೇನು ನೀನು ಹೋಗ್ತೀಯೋ ಇಲ್ಲವೋ?"

"ವಾರಕ್ಕೊಂದು ದಿನ ಸಿಗುವ ಭಾನುವಾರವಾದರೂ, ಮಧ್ಯಾಹ್ನ ಆರಾಮ ವಾಗಿ ಮಲಗೋಣ ಅಂದ್ರೆ ಬಿಡಲ್ಲವಲ್ಲ ನೀನು......."

"ನಾನು ಎಬ್ಬಿಸಿದರೆ ಹೇಗೆ ಸಿಡುಕ್ತೀಯ. ನಾಳೆ ಬರ್ತಾಳಲ್ಲ.....ನಿನ್ನ ಹೆಂಡತಿ. ಅವಳು ಬಾಯಿಯಿಂದ ಉಸುರಕ್ಕಿಲ್ಲ ಎದ್ದು ಓಡಿರ್ತೀಯಾ?"

"ಹಾಗಾವರೆ ಈಗ ಅಪ್ಪನೇ ಸರಿ ಈ ಕೆಲಸಕ್ಕೆ. ಹೋಗಿ ಅವರೆದುರಿಗೆ ಉಸುರು. ಅವರೇ ಓಡಿ ಹೋಗಿ ತರಲಿ....." ಅವನು ತಮಾಷೆಯಿಂದ ಹೇಳಿದರೂ, ಅವಳು ಮತ್ತೆ ನುಡಿದಳು.

"ಸರಿ, ಅವರೆಲ್ಲಿ ಏಳ್ತಾರೆ ಈಗ? ಕಾಫಿ ಹೊತ್ತಿಗೆ ಏಳೋದು....." ಬೇರೆ ಯಾವುದಾದರೂ ದಿನವಾಗಿದ್ದಿದ್ರೆ ಮಾಲತಿನ್ನೇ ಕಳಿಸಬಹುದಾಗಿತ್ತು." ಅವಳು ಗೊಣಗಿದಾಗ, ಮಾಲತಿ ಬಂದಳು.

"ಮೋಹನ, ನೀನು ಈಗ ಹೋಗೊದಾದ್ರೆ ನನ್ನನ್ನ ಮಧೂ ಮನೆಹತ್ರ ಡ್ರಾಪ್ ಮಾಡ್ತೀಯಾ!"

"ಮಧು ಮನೆಗಾ! ಈಗೇಕೆ? " ಮಲಗಿದ್ದಲ್ಲಿಂದಲೇ ಪ್ರಶ್ನಿಸಿದ.

"ಅದೆಲ್ಲಾ ನಿನಗ್ಯಾಕೆ? ಆಗುತ್ತಾ ಇಲ್ಲವಾ ಹೇಳು......"

"ಇಲ್ಲ ಅಂದ್ರೂ, ನೀನು ಹೋಗೇ ಹೋಗ್ತೀಯಾ..... ಸರಿ ನಡಿ.

ಬರ್ತೀನಿ. ಅದೇನೇನು ಬೇಕೋ ಎಲ್ಲಾ ಬರೆದು ಕೊಡು. ತಂದು ಕೊಡ್ತೀನಿ."

ಮಗ ಅಂಗಡಿಗೆ ಹೊರಡಲು ರೆಡಿಯಾದರೂ, ಭವಾನಮ್ಮ ಸಿಡುಕಿದಳು.

"ಈ ಬಿಸಿಲು ಹೊತ್ನಲ್ಲಿ ಅವಳ ಮನೆಗೇಕೆ! ಇವತ್ತಾದ್ರೂ ಅವಳ ಮನೆಗೆ ಹೋಗದಿದ್ರೆ ಏನು?" ಮಗಳನ್ನು ಕುರಿತು ಆಡಿದ್ದಳು.

"ನಂಗೆ ಸ್ವಲ್ಪ ಅರ್ಜೆಂಟ್ ಕೆಲಸವಿದೆ. ಬೇಗ ಬಂದುಬಿಡ್ತೀನಿ."

"ಬೇಡ" ಎಂದು ತಡೆದು ನಿಲ್ಲಿಸುವ ಮನಸ್ಸಾದರೂ, ಸಧ್ಯದಲ್ಲೇ ಮದುವೆಯಾಗಿ ಹೋಗುವವಳು, ಅಲ್ಲದೇ ಈ ದಿನ ಗಂಡಿನವರು ಬರುವವರಿದ್ದಾರೆ, ಏನಾದರೂ ಅಂದರೆ ರೇಗಿ ಸಿಟ್ಟುಮಾಡಿಕೊಂಡು, ಮುಖ ಕೆಡಿಸಿಕೊಂಡು, ಅತ್ತು ರಂಪಗಿಂಪ ಮಾಡಿದರೆ? ಎಂದುಕೊಂಡು, "ದಿನಾ ಅದೇನು ಅರ್ಜೆಂಟು ಕೆಲಸವೊ? ಮೋಹನ, ನೀನು ಬರ್ತಾ ಹಾಗೇ ಕರೆದುಕೊಂಡು ಬಂದುಬಿಡು. ಬಿಸಿಲ್ನಲ್ಲಿ ನಡೆದುಕೊಂಡು ಬರುವುದು ಖಂಡಿತಾ ಬೇಡ" ಎಂದು ಒತ್ತಿಹೇಳಿ, ಒಳಗೆ ನಡೆದಳು. ಸಾಮಾನಿನ ಪಟ್ಟಿ ಬರೆದು, ಚೀಲಗಳನ್ನು ತಂದುಕೊಡುವುದು ಬಾಕಿ ಇತ್ತು.

ಮೋಹನ ಎದ್ದು ಮುಖ ತೊಳೆದು, ತಲೆ ಬಾಚಿಕೊಂಡು ಇಸ್ತ್ರಿಮಾಡಿದ ಬಟ್ಟೆಗಳನ್ನು ಧರಿಸಿಕೊಂಡ. ಮಾಲತಿ ಹಿಂದಿನಿಂದ ಬಂದು ರೇಗಿಸಿದಳು.

"ಇದೇನಪ್ಪಾ....... ಅಂಗಡಿಗೆ ಹೋಗುವುದಕ್ಕೆ ಇಷ್ಟು ಶೃಂಗಾರ?"

"ಅಂಗಡಿಗಲ್ಲ..... ಬರ್ತಾನಲ್ಲ, ನಿನ್ನನ್ನು ನೋಡಕ್ಕೆ ವರ ಮಹಾಶಯ. ಅದಕ್ಕೆ ಈಗಲೇ ರೆಡಿಯಾಗಿರ್ತೀನಿ ಅಷ್ಟೇ."

ಅವನು ಹಾಗೆ ನುಡಿದರೂ, ಅವಳು ಅದನ್ನು ನಂಬಲಿಲ್ಲ. ಅವನೇನು ಶೃಂಗಾರ ಪ್ರಿಯನಲ್ಲ. ಅತಿ ಸಾಧಾರಣ ಅಲಂಕಾರದಲ್ಲೇ ದಿನಗಳನ್ನು ಕಳೆಯುತ್ತಿದ್ದ. ಇದ್ದಕ್ಕಿದ್ದಂತೆ ಮಲಗಿದ್ದವನು, ಹೆಚ್ಚಿಗೆ ಹೇಳಿಸಿಕೊಳ್ಳದೇ ಅಂಗಡಿಗೆ ಹೊರಟಿದ್ದೂ ಅಲ್ಲದೇ, ಅವನ ಉಡುಪು ಅವಳಿಗೆ ಅಚ್ಚರಿಯನ್ನುಂಟು ಮಾಡಿತ್ತು.

"ಇವತ್ತು ಬರುತ್ತಾ ಇರೋದು, ನನ್ನನ್ನು ನೋಡೋಕೆ..... ಅವರ ಮನೆ ಹುಡಿಗಿಗೆ ಮದುವೆ ಆಗಿದೆ ಗೊತ್ತಾ?"

"ಗೊತ್ತು...... ದಿನದ ಹಾಗೇ ಸಾಧಾರಣವಾಗಿದ್ದರೆ, ಇದೇನಪ್ಪಾ ಈ ಹುಡುಗನಿಗೆ ಬಡತನ ಅಂತ ಅಂದು ಕೊಂಡರೆ? ನಿನಗೇ ಅವಮಾನವಲ್ಲ ವೇನೆ?"

"ಹಂ..... ನೀನು ಯಾರಿಗೂ ಹೆದರದಿದ್ದವನು, ನನ್ನ ಗಂಡನಾಗುವವನಿಗೆ

ಹೆದರುತ್ತೀಯಾ ಅನ್ನು..... ಹಾಗಾದರೆ......"

"ಎಲ್ಲಾದಕ್ಕೂ ಏನಾದರೂ ಒಂದು ಆಡಬೇಡ, ನಡಿ......"

ಅವಳು ಚಪ್ಪಲಿ ಮೆಟ್ಟಿ ಮೆಟ್ಟಲಿಳಿದು, "ಅಮ್ಮಾ ಬರ್ತೀನಿ" ಎಂದಾಗ ಭವಾನಮ್ಮ ಓಡೋಡಿ ಬಂದಳು. ಮೆಲುದನಿಯಲ್ಲಿ ನುಡಿದಳು.

"ಅಲ್ಲಿ, ನಿನ್ನ ಸ್ನೇಹಿತೆ ಹತ್ತಿರ, ಇದ್ನೆಲ್ಲಾ ಹೇಳಬೇಡ ಈಗಲೇ....."

"ಯಾಕಮ್ಮಾ ..... ಹೇಳಿದರೆ ಏನೀಗ?"

"ಹೇಳಿದಷ್ಟು ಕೇಳು...... ಹೇಳಬೇಡ ಎಂದರೆ ಹೇಳಬೇಡ. ಅಷ್ಟೇ..." ಆ ಮಾತು ಮಾಲತಿಗೆ ಹಿಡಿಸಲಿಲ್ಲ. ಸ್ನೇಹಿತೆಗೆ ಈ ವಿಷಯವನ್ನು ತಿಳಿಸಲೆಂದೇ ಹೊರಟವಳು.... ತಾಯಿಗೆ ಏನನ್ನೂ ಹೇಳದೇ, ಸ್ಕೂಟರ್ ಸ್ಟಾರ್ಟ್‌ಮಾಡಿ ನಿಂತಿದ್ದ ಮೋಹನನ ಬಳಿಗೆ ಬಂದಳು. ಹಿಂದಿನಿಂದ ತಾಯಿ ಬಂದು, ಅವನ ಕೈಗೆ ಚೀಲಗಳನ್ನು, ಪಟ್ಟಿಯನ್ನು ಕೊಟ್ಟಳು.

ಅಣ್ಣನ ಬೆನ್ನ ಹಿಂದೆ ಕುಳಿತು, ಸ್ನೇಹಿತೆಯ ಮನೆಗೆ ಹೊರಟವಳನ್ನೇ ನೋಡಿ, "ಈ ಹುಡುಗಿಗೆ ಯಾವಾಗ ತಿಳುವಳಿಕೆ ಬರುತ್ತೋ" ಎಂದುಕೊಂಡು ಮನೆಯೊಳಗೆ ಬಂದಳು.

ತನ್ನ ಸ್ನೇಹಿತೆಯ ಮನೆಯ ಮುಂದೆ ಸ್ಕೂಟರಿನಿಂದ ಇಳಿದವಳು ಅಣ್ಣನಿಗೆ ಹೇಳಿದಳು.

"ನೀನು ಮತ್ತೆ ಬರಬೇಡ, ನಾನು ಈಗಲೇ ತಕ್ಷಣ ಹೊರಟು ಬಿಡ್ತೀನಿ"

"ಹಾಗಾದರೆ, ಬೇಗ ಅದೇನು ಮಾತಿದೆಯೋ ಮುಗಿಸಿ ಬಾ... ಇಲ್ಲೇ ನಿಂತಿರ್ತೀನಿ.... ನೀನೂ ಮಾರ್ಕೆಟ್ಟಿಗೆ ಬರುವೆಯಂತೆ."

"ಮಾರ್ಕೆಟ್ಟಿಗೆ ಬರೊಕ್ಕೆ ಬೇಜಾರಪ್ಪಾ..... ಪ್ಲೀಸ್ ಹೋಗು. ನೀನೇನು ಹೆದರ್‍ಕೊ ಬೇಡ. ಅಮ್ಮ ನನ್ನನ್ನೇನೂ ಅನ್ನಲ್ಲ."

"ನಿನ್ನನ್ನ ಅನ್ನಲ್ಲ.... ನನ್ನನ್ನ ಅಂತಾಳೆ. ನಾನು ಮದುವೆಯಾಗಿ ಬೇರೆ ಹೋದರೂ ನನ್ನನ್ನ ಅಂತಾಳೆ. ನಿನಗೆ ಕನ್ಸೇಷನ್" ಮಾಲತಿ ಗೊಳ್ಳನೆ ನಕ್ಕು, ಅವನನ್ನು ಅಲ್ಲೇ ಬಿಟ್ಟು ಸ್ನೇಹಿತೆಯ ಮನೆಯ ಬಾಗಿಲಿಗೆ ಹೋಗಿ ಬೆಲ್ ಮಾಡಿದಳು.

ಬಾಗಿಲನ್ನು ತೆಗೆದವಳು ಮಧುರ. ಮಾಲತಿಯ ಬೆನ್ನ ಹಿಂದೆ ರಸ್ತೆಯಲ್ಲಿ ನಿಂತಿದ್ದ ಮೋಹನನನ್ನು ನೋಡಿ, "ಅವರನ್ನು ಕರಿಯೇ" ಎಂದಳು.

"ಆಂ. ಏನಂದೆ! ಅವರಾ! ಅವರು ಬೇಡ..... ಅವರು ಮಾರ್ಕೆಟ್ಟಿಗೆ ಹೋಗಬೇಕು. ನಾನು ನಿನ್ನ ಹತ್ತಿರ ಮುಖ್ಯವಾದ ವಿಷಯ ಮಾತನಾಡಬೇಕು.

ಅದಕ್ಕೆ ಬಂದೆ" ನೀನು ಹೋಗು ಎಂದು ಅವನ ಕಡೆ ಸನ್ನೆ ಮಾಡಿ, ತಿರುಗಿ ನೋಡದೇ ಒಳಗೆ ನಡೆದಳು.

"ಎಲಾ ಇವಳಾ! ಅವಳು ಬರಲಿ ಎಂದರೂ, ಇವಳು ಬೇಡ ಎಂದಳಲ್ಲ. ಬರಲಿ ಮನೆಗೆ" ಎಂದುಕೊಂಡು, ಮಾರ್ಕೆಟ್ ಕಡೆ ಹೊರಟ.

ಮಧುರ ಏನೂ ಹೊಸದಾಗಿ ಪರಿಚಯವಾದವಳಲ್ಲ. ಈಗ ಅವಳು ಮಾಲತಿಯ ಆತ್ಮೀಯ ಸ್ನೇಹಿತೆ ಅಷ್ಟೇ. ಮೊದಲು, ಅವರು ಪಕ್ಕದ ಮನೆಯಲ್ಲಿಯೇ ಬಾಡಿಗೆಗೆ ಇದ್ದವರು. ಆಗ, ಮಧುರ ತನ್ನ ಚಿಕ್ಕ ತಂಗಿ, ರಾಗಿಣಿಯನ್ನು ಎತ್ತಿಕೊಂಡು, ಬರುತ್ತಿದ್ದಳು. ಹೈಸ್ಕೂಲಿನಲ್ಲಿ ಓದುತ್ತಿದ್ದ ಮೋಹನ, ಹುಡುಗಿಯರ ಕಡೆ ಹೆಚ್ಚಿನ ಗಮನ ಕೊಡುತ್ತಿರಲಿಲ್ಲ.

ಅವನು ಕಾಲೇಜಿನಲ್ಲಿ ಓದುತ್ತಿದ್ದ ಸಮಯದಲ್ಲಿ ತಂದೆ ಭೀಮರಾಯರು, ಈಗ ಅವರುಗಳು ವಾಸಿಸುತ್ತಿರುವ ಮನೆಯನ್ನು ಕಟ್ಟಿಸಿದರು. ಅವರು ಬಾಡಿಗೆ ಮನೆಯಿಂದ ಸ್ವಂತ ಮನೆಗೆ ಹೋದರು. ಆದರೆ ಇವರುಗಳು ಇನ್ನು ಇದೇ ಬಾಡಿಗೆ ಮನೆಯಲ್ಲಿಯೇ ಇದ್ದಾರೆ. ಈಗ ಮಾಲತಿಯೇ ಹೆಚ್ಚಾಗಿ ತನ್ನ ಸ್ನೇಹಿತೆ ಮನೆಗೆ ಬರುತ್ತಿದ್ದುದು.

ಒಂದೇ ತರಗತಿಯಲ್ಲಿ, ಒಂದೇ ಬೆಂಚಿನಲ್ಲಿ ಕೂತು ಪಾಠ ಕಲಿತು ಬೆಳೆದು ದೊಡ್ಡವರಾದರು. ಕಾಲೇಜಿಗೆ ಹೋಗುವಾಗಲು ಅಷ್ಟೆ. ಮಾಲತಿಯೇ ದಿನಾ ಮಧುರಳ ಮನೆಗೆ ಬಂದು, ಅವಳ ಜೊತೆಯಲ್ಲಿಯೇ ಹೋಗಬೇಕು. ಇದೇ ಪರಿಪಾಠ, ಭವಾನಮ್ಮ ಆಗಾಗ್ಗೆ ರೇಗುತ್ತಿದ್ದುದೂ ಉಂಟು.

"ನೀನೇಕೆ ದಿನಾ ಅವಳ ಮನೆ ಬಾಗಿಲಿನಲ್ಲಿ ಹೋಗಿ ನಿಲ್ಲಬೇಕು! ಅವಳೇಕೆ ಬರೊಲ್ಲ?"

"ಹೋದರೇನಾಯ್ತು ಬಿಡಮ್ಮ? ಕಾಲೇಜಿಗೆ ಹೋಗಲು ಅದೇ ರಸ್ತೆ ಅವಳ ಮನೆ ಮುಂದೇನೇ ಹೋಗಬೇಕು. ಅವಳು ಇಲ್ಲಿಗೆ ಬಂದರೆ, ಮತ್ತೆ ನಾವಿಬ್ಬರೂ ಹಾಗೇ ತಾನೇ ಹೋಗಬೇಕು?"

ಅದು ನಿಜವಾದ ಮಾತು. ಆದುದರಿಂದ ಭವಾನಮ್ಮ ಸುಮ್ಮನಾದಳು.

ಆ ಸ್ನೇಹ ಕಾಲೇಜಿನ ವಿದ್ಯಾಭ್ಯಾಸ ಮುಗಿದ ಮೇಲೂ ಹಾಗೆಯೇ ಮುಂದುವರೆಯಿತು. ಬಿ.ಎಸ್ಸಿ. ಮುಗಿಸಿ, ಮಾಲತಿ, ಮಧುರ ಇಬ್ಬರೂ ಕೆಲಸಕ್ಕೆ ಪ್ರಯತ್ನಿಸಿದ್ದರು. ಆದರೆ ಇದುವರೆಗೂ ಯಾವ ನೌಕರಿಯೂ ಸಿಕ್ಕಿರಲಿಲ್ಲ.

ಉದ್ವೇಗ, ಉತ್ಸಾಹಗಳಿಂದ ಮಾಲತಿ ತನ್ನನ್ನು ನೋಡಲು ಗಂಡಿನ ಮನೆಯವರು ಬರಲಿದ್ದಾರೆಂದು ತಿಳಿಸಿದಾಗ, ಮಧುರ ಸಂತೋಷದಿಂದ

ಸ್ನೇಹಿತೆಯ ಕೈಗಳನ್ನು ಕುಲಕಿ, 'ಆಲ್ ದಿ ಬೆಸ್ಟ್' ಎಂದು ಹರಸಿದ್ದಳು. ಒಂದು ಘಳಿಗೆ ಸ್ವಲ್ಪ ವ್ಯಥೆಯೂ ಆಯಿತು. ಸ್ನೇಹಿತೆ ಮದುವೆಯಾಗಿ ಹೊರಟುಹೋದರೆ, ತಮ್ಮ ಸ್ನೇಹಕ್ಕೆ ಧಕ್ಕೆ ಬರುತ್ತದೆ ಎಂದಷ್ಟೇ. ತನಗೆ ಮಾತ್ರ ಹಾಗೆ ಅನ್ನಿಸುತ್ತದೆ, ಇವಳು ಮಾತ್ರ ಎಷ್ಟು ಖುಷಿಯಾಗಿದ್ದಾಳೆಂದುಕೊಂಡಾಗ, ತನಗೂ ಮದುವೆಯಾಗಿ ತಾನೂ ಇವಳಂತೆ ಖುಷಿ ಪಡುವಂತಿದ್ದರೆ ಎಂದುಕೊಂಡಳು.

"ಇದೇ ಮೊದಲನೇ ಇಂಟರ್‌ವ್ಯೂ ಕಣೇ. ನನಗೆ ಒಂದು ತರಹ ಆಗುತ್ತೆ. ನೀನೂ ಬರ್ತೀಯೇನೆ ನಮ್ಮ ಮನೆಗೆ!" ಮಾಲತಿ ಕೇಳಿದಾಗ, ಮಧುರ ನಕ್ಕಳು.

"ಚೆನ್ನಾಗಿದೆ ನಿನ್ನ ಮಾತು. ನಿನ್ನ ವಯಸ್ಸಿನವಳು ನಾನು ನಿನ್ನೆ ಜತೆಯಲ್ಲಿ ಕೂತರೆ ಯಾರಾದ್ರೂ ನಗ್ತಾರೆ ಅಷ್ಟೇ."

"ಯಾರು ಏನು ಬೇಕಾದರೂ ಅಂದುಕೊಳ್ಳಲಿ, ನಮಗೇನು!"

"ಸರಿಯಲ್ಲ. ಮಾಲತಿ, ಅದು ಚೆನ್ನಾಗಿರಲ್ಲ" ಮಧುರ ತಲೆಯಾಡಿಸಿದಳು.

"ಒಂದು ವೇಳೆ, ನಿನ್ನನ್ನೇ ನನ್ನ ಸ್ಥಳದಲ್ಲಿಟ್ಟುಕೊಂಡು ನೋಡು. ನಿನಗೂ ಹೀಗೇ ಅನ್ನಿಸಿದ್ದರೆ ನನ್ನನ್ನು ಕೇಳುತ್ತಿರಲಿಲ್ವಾ!"

"ಬಹುಶಃ ಇಲ್ಲ ಅಂತ ಕಾಣುತ್ತೆ. ಇದು ತೀರಾ ಪರ್ಸನಲ್ ವಿಷಯ..... ಒಂದು ವೇಳೆ ಅವನು ನನ್ನನ್ನು ಒಪ್ಪದೇ ನಿನ್ನನ್ನು ಒಪ್ಪಿದರೇ.... ಆಗ ನನಗೆ ಆಗಬಹುದಾದ ಆಘಾತವನ್ನು ಊಹಿಸಬಲ್ಲೆಯಾ?" ಮಧುರ ನಕ್ಕು ನುಡಿದಳು.

"ಅಂದರೆ ಈಗ ಬರುವವನು. ನಿನ್ನನ್ನು ಒಪ್ಪಿಕೊಂಡರೆ ಅಂತ ಹೆದರಿಕೇನಾ? ಇಂಪಾಸಿಬಲ್.... ಅದು ಹೇಗೇ ಸಾಧ್ಯ?"

"ಪಾಸಿಬಲ್, ಇಂಪಾಸಿಬಲ್ ವಿಷಯ ಏಕೆ? ನಿಮ್ಮ ಅಮ್ಮನ್ನ ಕೇಳಿದ್ದೀಯಾ? ಅವರು ಏನಂದರು?"

"ಅಮ್ಮ, ಈಗಲೇ ಯಾರಿಗೂ ಹೇಳಬೇಡ ಅಂದಿದ್ಲು. ನಿನಗೂ ಸಹ. ಆದರೆ ನನಗೆ ತಡೆಯಲಾಗದೇ ನಿನ್ನನ್ನು ಕಂಡು ಎಲ್ಲಾ ಹೇಳಬೇಕು ಅಂತ ಬಂದಿದ್ದೀನಿ ಗೊತ್ತಾ?"

"ಅದು, ನನ್ನ ನಿನ್ನ ಸ್ನೇಹದ ಹಿರಿಮೆ. ಇದು ಹೀಗೇ ಮುಂದುವರೆಯಲಿ. ಆದರೆ ಇವತ್ತು ಮಾತ್ರ ನಾನು ಬರಲ್ಲ. ಬಲವಂತ ಮಾಡಬೇಡ ಪ್ಲೀಸ್. ನಿನ್ನ ಎಂಗೇಜ್‌ಮೆಂಟ್ ದಿನ ಖಂಡಿತಾ ಬರ್ತೀನಿ. ಬೇಕಾದ್ರೆ ರಾಗಿಣೀನ ಕರೆದುಕೊಂಡು ಹೋಗು. ಅವಳಿನ್ನು ಚಿಕ್ಕವಳು."

ಒಂದು ಗಳಿಗೆ ಸ್ನೇಹಿತೆಗೆ ಅಸೂಯೆಯೇನೋ ಎಂಬ ಅನುಮಾನ ಉಂಟಾದರೂ, ತಕ್ಷಣವೇ ಅದನ್ನು ತೊಡೆದು ಹಾಕಿದಳು. ಛೇ! ಮಧುರ ಒಳ್ಳೆಯ ಸ್ನೇಹಿತೆ, ಅವಳ ಸಲಹೆ ನಿರಾಧಾರವಾದುದಲ್ಲ... ಎಂದು ಕೊಂಡಳು. ತನ್ನ ಗಂಡನಾಗುವವನನ್ನು ತನ್ನ ಸ್ನೇಹಿತೆಯೂ ನೋಡಿ ಒಪ್ಪಿಗೆ ನೀಡಲಿ ಎಂಬ ಒಂದು ಉದ್ದೇಶದಿಂದ ಓಡಿ ಬಂದಿದ್ದಳು. ಇವಳು ಈಗ ಹೇಳುತ್ತಿರುವುದು, ಸರಿಯೋ ಅಲ್ಲವೋ, ಅವಳ ಮಾತಿಗೆ ಒಪ್ಪುವುದೇ ಸರಿ ಎಂದುಕೊಂಡು,

"ಸರಿ, ಹಾಗಾದ್ರೆ, ನಾನು ಹೊರಡ್ಲಾ? ಅಮ್ಮ ಬೇಗ ಬಾ ಅಂದಿದ್ಲು"

"ನಿಮ್ಮಣ್ಣ ಬರ್ತಾರಾ ಕರೆದುಕೊಂಡು ಹೋಗಕ್ಕೆ?"

"ಇಲ್ಲ. ಬರಬೇಡ ಅಂತ ಹೇಳಿದ್ದೆ."

"ಸರಿ, ಹಾಗಾದ್ರೆ ನಿನ್ನ ಜತೆಗೆ ರಾಗಿಣೀನ ಕಳಿಸ್ತೀನಿ...." ಅಕ್ಕನ ಮಾತಿಗೆ ಎದುರಾಡದೇ ರಾಗಿಣಿ ಮಾಲತಿಯ ಜತೆಯಲ್ಲಿ ಹೊರಟಳು.

ಒಬ್ಬಳೇ ಬರದೇ, ಜತೆಗೆ ರಾಗಿಣಿಯನ್ನು ಕರೆದುಕೊಂಡು ಬಂದುದು ಸರಿ ಎನಿಸಲಿಲ್ಲ ಭವಾನಮ್ಮನಿಗೆ.

"ಈ ಕೋತೀನ ಯಾಕೆ ಕರೆದುಕೊಂಡು ಬಂದಳೋ. ಅತಿ ಚೆಲ್ಲು." ತನ್ನಲ್ಲೆ ಅಂದುಕೊಂಡಳು.

"ಏನೇ, ಮೋಹನ ಎಲ್ಲಿ? ಅವನು ಬರಲಿಲ್ವಾ!" ದನಿಯಲ್ಲಿ ಅಸಹನೆಯಿತ್ತು.

"ಇಲ್ಲಮ್ಮಾ ನಾನು ಒಬ್ಬಳೇ ಬರಬೇಕಾಗುತ್ತಲ್ಲ ಅಂತ ಇವಳನ್ನು ಕರೆದುಕೊಂಡು ಬಂದೆ."

"ಸಧ್ಯ, ಇವಳ ಅಕ್ಕನನ್ನು ಕರೆದುಕೊಂಡು ಬರಲಿಲ್ಲವಲ್ಲ" ಎಂದು ತನ್ನಲ್ಲೇ ಹೇಳಿಕೊಂಡಳು.

ಅವಳಿಗೆ ಮಧುರಳ ಮೇಲೇನೂ ದ್ವೇಷವಿಲ್ಲ. ತನ್ನ ಮಗಳಿಗಿಂತ ಅವಳು ರೂಪವಂತೆ ಎಂದು ಗೊತ್ತು. ಚಿಕ್ಕ ಹುಡುಗಿಯಾಗಿದ್ದಾಗಿನಿಂದ ಅವಳನ್ನು ಬಲ್ಲವಳು. ಆದರೂ ಈ ದಿನ, ಅವಳು ತನ್ನ ಮಗಳಿಗೆ ಪ್ರತಿಸ್ಪರ್ಧಿಯಾಗಿ ಕಾಣಬಾರದು ಅಂತ ಅನ್ನಿಸಿತ್ತು. ಸುಮಾರು ಹನ್ನೆರಡು ಹದಿಮೂರು ವರ್ಷದ ರಾಗಿಣಿ, ಅಕ್ಕನಿಗಿಂತ ಚೆನ್ನ ಅಂತ ಎನ್ನಿಸಿದ್ದರೂ, ಇನ್ನು ಚಿಕ್ಕವಳು, ಪರವಾಗಿಲ್ಲ ಎನ್ನಿಸಿತ್ತು. ಆದರೂ ಏನೋ ಅಸಮಾಧಾನದಿಂದ ರಾಗಿಣಿಯನ್ನು ಮಾತನಾಡಿಸದೆ ಒಳಗೆ ಹೋದಳು.

ಅಷ್ಟರಲ್ಲಿ ಮೋಹನ ಬಂದ. ಮಾಲತಿಯೇ ರಾಗಿಣಿಯನ್ನು ಅವನ ಬಳಿಗೆ ಹೋಗುವಂತೆ ಹೇಳಿದಳು.

"ಹೋಗೇ, ಅವನ ಹತ್ತಿರವಿರುವ ಚೀಲಗಳನ್ನು ತೆಗೆದುಕೊಂಡು ಬಾ."

ರಾಗಿಣಿ ಅವನ ಹತ್ತಿರ ಹೋದ ಕೂಡಲೇ ಮೋಹನ ನಕ್ಕ.

"ಏನೇ ಗಿಣಿ, ಒಬ್ಬಳೇ ಬಂದ್ಯಾ?"

"ಥೂ.... ಹೋಗೋ..... ನಾನೇನು ಗಿಣಿಯಲ್ಲ...."

"ಸರಿ... ಸರಿ..... ಗಿಣಿಯಲ್ಲ. ಹಾಗಾದ್ರೆ ರಾಗಿನೋ....?"

"ರಾಗಿ ಪಾಗಿ ಅಂತ ಕರೆದ್ರೆ ನಾನು ನಿನ್ನ ಹತ್ತಿರ ಮಾತನ್ನೇ ಆಡಲ್ಲ." ಮುಖ ಊದಿಸಿಕೊಂಡಳು.

"ಸಾರಿ, ಸಾರಿ, ರಾಣಿ ಸಾಹೇಬ್ರು....... ಕರೆಕ್ಟ್?" ನಕ್ಕ.

"ಏನೋ ಅದು? ಅಲ್ಲೇ ನಿಂತುಕೊಂಡು ಅದೇನು ಮಾತು! ಮೊದಲು ಬಾ ಒಳಗೆ" ಭವಾನಮ್ಮ ಬಾಗಿಲಿನಲ್ಲಿ ನಿಂತು ಕೂಗು ಹಾಕಿದಾಗ, ಮೋಹನ ರಾಗಿಣಿಯ ಕೈಗೆ ಚೀಲಗಳನ್ನು ಇತ್ತ. ಸ್ಕೂಟರನ್ನು ನಿಲ್ಲಿಸಿ ಒಳಗೆ ಬಂದ.

"ಅದೇನಮ್ಮ? ನಾಲ್ಕು ಮನೆಗೆ ಕೇಳುವ ಹಾಗೆ ಕಿರುಚ್ತೀಯಲ್ಲ. ನಾನೇನು ಬರುತ್ತಿರಲಿಲ್ವೆ!"

"ನಾನು ನಿನಗೋಸ್ಕರ ಕಾಯ್ತಾ ಇದೀನಿ. ಬೇಗ ಕೊಡು..... ಅದೇನು ಮಕ್ಕಳೋ, ಅಣ್ಣ ತಂಗಿ ಇಬ್ಬರಿಗೂ, ಇವರಿಬ್ಬರು ಸಿಕ್ಕಿದರೆ ಸಾಕು, ಅದೇನು ಹರಟೆ! ಅದೇನು ನಗು! ಹುಂ.... ಗೊಣಗುತ್ತಾ ಒಳ ನಡೆದಾಗ, ಅವನೂ ಹಿಂದೆಯೇ ಹೋದ."

"ಅದೇನಮ್ಮ ಹೀಗಾಡ್ತಿದೀ ಇವತ್ತು? ರಾಗಿಣಿ ನನಗೆ ಹೊಸಬಳಾ! ಅವಳ ಜತೆ ಮಾತನಾಡಿದರೆ ಹೀಗಾಡ್ತೀಯಲ್ಲ. ನೀನು?"

"ಅದೇನು ಮೋಡಿ ಮಾಡಿದ್ದಾರೋ ಇಬ್ಬರೂ.... ಬೇಡ ಅಂದ್ರೂ, ತಾನೇ ಹೋಗಿ ಕರೆದುಕೊಂಡು ಬಂದಿದಾಳೆ.... ಇದನ್ನ...."

"ಮಧುರಾನೂ ಬಂದಿದ್ದಾಳಾ!" ಆಸೆಯಿಂದ ಕೇಳಿದ.

"ಸಧ್ಯ, ಅವಳು ಬಂದಿದ್ದರೆ ಚೆನ್ನಾಗಿತ್ತಾ?..... ಅವಳದ್ದೇ ಇಂಟರ್‌ವ್ಯೂ ನಡೀತಿತ್ತು."

"ಯಾಕಮ್ಮ.....ಏನಾಗಿದೆ ನಿನಗೆ ಇವತ್ತು?"

"ಮತ್ತಿನ್ನೇನು? ಬಂದವರು ಖಂಡಿತಾ ಅವಳನ್ನೇ ಒಪ್ಪುತ್ತಿದ್ದುದು."

"ಅದು ಹೇಗೆ ಸಾಧ್ಯ! ಅವಳು ಮಾಲತಿಗಿಂತ ಚೆನ್ನಾಗಿರಬಹುದು. ಆದರೆ.....?"

"ಆದರೆ..... ಏನು? ಈ ಕಾಲದಲ್ಲಿ ಎಲ್ಲವೂ ಸಾಧ್ಯ!"

"ನಾನು ಹಾಗಾಗೊಕ್ಕೆ ಖಂಡಿತಾ ಬಿಡುತ್ತಿರಲಿಲ್ಲ." ಎಂದು ಹೇಳಿ ತಾಯಿಯ ಕಡೆ ನೋಡದೇ ತನ್ನ ಪಾಡಿಗೆ ತಾನು ಹಿಂತಿರುಗಿದ. ಅವನ ಬೆನ್ನನ್ನೇ ತಾಯಿ ಒಂದು ಗಳಿಗೆ ಅನುಮಾನದಿಂದ ನೋಡಿ, ತನ್ನ ಕೆಲಸದಲ್ಲಿ ಮಗ್ನಳಾದಳು.

ಗಂಡಿನ ಮನೆಯವರು ಬರುವ ಹೊತ್ತಿಗೆ ಎಲ್ಲಾ ಸಿದ್ಧವಾಗಿದ್ದರು. ಮಾಲತಿಯ ಅಲಂಕಾರವೂ ಮುಗಿದಿತ್ತು.

"ಈ ಸೀರೆ ಚೆನ್ನಾಗಿದೆಯೇನೇ..... ಈ ರವಿಕೆ ಮ್ಯಾಚ್ ಆಗುತ್ತೇನೇ" ಎಂದು ರಾಗಿಣಿಯನ್ನೇ ಕೇಳಿ, ಕೇಳಿ, 'ಹುಂ' ಎನಿಸಿಕೊಂಡು ಸಿದ್ಧವಾಗಿದ್ದಳು. ಮಧುರ ಬಂದಿದ್ದರೆ, ಚೆನ್ನಾಗಿತ್ತು ಎನಿಸುತ್ತಿತ್ತು.

ಗುಲಾಬಿ ಬಣ್ಣದ ಸೀರೆಯನ್ನುಟ್ಟು ಅದಕ್ಕೆ ಒಪ್ಪುವ ರವಿಕೆ ಧರಿಸಿ, ಹೇಗೆ ಕಾಣುತ್ತೆ? ಎಂದು ರಾಗಿಣಿಯನ್ನೇ ಕೇಳಿ, ಅವಳು ಫಸ್ಟ್‌ಕ್ಲಾಸ್ ಎಂದಾಗ ಸಂತೃಪ್ತಿಯಿಂದ ತನ್ನನ್ನು ತಾನೇ ಕನ್ನಡಿಯಲ್ಲಿ ಮತ್ತೊಮ್ಮೆ ನೋಡಿಕೊಂಡಳು.

ತನ್ನ ರೇಶಿಮೆ ಲಂಗವನ್ನು ರಾಗಿಣಿಯ ಕೈಗೆ ಇಟ್ಟು, "ಇದನ್ನು ಹಾಕ್ಕೋ ರಾಗಿಣಿ, ನಿನಗೆ ಚೆನ್ನಾಗಿ ಒಪ್ಪುತ್ತೆ." ರಾಗಿಣಿ ಅನುಮಾನಿಸಿದಳು.

"ಪರವಾಗಿಲ್ಲ. ತೊಟ್ಕೊಳ್ಳೇ.... ಇನ್ನು ಈ ಲಂಗಾನ ನಾನು ಖಂಡಿತಾ ಹಾಕಿಕೊಳ್ಳಲ್ಲ. ನಿನಗೇ ಕೊಟ್ಟುಬಿಡ್ತೀನಿ."

ರಾಗಿಣಿ, ಲಂಗ, ರವಿಕೆ ಬದಲಾಯಿಸಿ ಹೊರಬಂದಾಗ, ಮೋಹನ ಗಮನಿಸಿದ. "ಅರೇ ರಾಣೀ.... ನಿನಗೋಸ್ಕರ ಯಾವ ರಾಜಕುಮಾರ ಬರುತ್ತಿದ್ದಾನೆ ಇವತ್ತು!" ರೇಗಿಸಿದ.

"ಥೂ ಹೋಗೊ...." ರಾಗಿಣಿ ನಾಚಿದಾಗ, ಆ ಮುಖಕ್ಕೆ ಮಧುರಳ ಮುಖವನ್ನು ಹೋಲಿಸಿಕೊಂಡು, ಮೋಹನ ತನ್ನಲ್ಲೇ ಮುಗುಳ್ನಕ್ಕ.

"ಏನೋ, ನೀನೇ ನಗ್ತಾ ಇದಿಯಾ! ಅದೇನು ಅಂತ ನನಗೂ ಹೇಳು" ಎಂದು ಅವನೆದುರಿಗೆ ಬಂದು ನಿಂತಳು ಮಾಲತಿ.

ಮೇಲಿನಿಂದ ಕೆಳಗೆ ಅವಳನ್ನೇ ನೋಡಿ, ಮೆಚ್ಚಿಗೆಯನ್ನು ಸೂಚಿಸಿದ.

"ಮನೋಹರ ಇವತ್ತು ಇಲ್ಲೇ ನೋಡಿ, ಫೈಂಟ್ ಆಗಿಬಿಡ್ತಾನೆ ನೋಡು..."

"ಹಾಗಾದ್ರೆ ನೀನೂ ಯಾರಾದ್ರೂ ಒಬ್ಬ ಹುಡುಗೀನ ಹೀಗೆ ನೋಡಿದ ದಿನ ನೀನೂ ಫೈಂಟ್ ಆಗಿ ಬಿಡ್ತೀಯ ಅನ್ನು."

"ಫೈಂಟ್ ಆಗಿ ಚೇತರಿಸಿಕೊಳ್ತಾ ಇದೀನಿ....." ಅವನ ಮಾತುಗಳನ್ನು ಕೇಳಿಸಿ ಕೊಳ್ಳಲು ಮಾಲತಿ ಅಲ್ಲಿ ನಿಂತಿರಲಿಲ್ಲ. ಅಡಿಗೆ ಮನೆಗೆ ಹೋಗಿದ್ದಳು.

ಗಂಡಿನ ಕಡೆಯವರು ಬಂದಿದ್ದವರು ನಾಲ್ಕೇ ಜನ. ವರನ ತಂದೆ ನಾಗಪ್ಪ. ತಾಯಿ ಭಾಗ್ಯಮ್ಮ ಹಾಗೂ ಮನೋಹರನ ಸ್ನೇಹಿತ ಮಾಧವ. ಮೂರು ಜನ ಆಗುತ್ತೆ ಅಂತ ಅವನನ್ನು ಕರೆದುಕೊಂಡು ಬಂದಿದಾರೇನೋ ಎಂದುಕೊಂಡರು.

ಪರಸ್ಪರ ಪರಿಚಯಗಳೊಂದಿಗೆ, ಎಲ್ಲರೂ ಕುಳಿತರು. ಮೋಹನ ರಾಗಿಣಿಯ ಸಹಾಯದೊಡನೆ ಎಲ್ಲರಿಗೂ ಕೇಸರಿ ಭಾತ್, ರವೆ ಭಾತ್‌ಗಳ ತಟ್ಟೆಗಳನ್ನು ಕೊಟ್ಟ. ಎಲ್ಲರೂ ಮಾತನಾಡುತ್ತಾ ತಿಂಡಿಯನ್ನು ಚಪ್ಪರಿಸಿಕೊಂಡು, ತಿನ್ನುತ್ತಿರುವಾಗಲೇ ಮಾಲತಿ, ರಾಗಿಣಿಯೊಡನೆ ಹೊರಗೆ ಬಂದಳು. ಹಾಸಿದ್ದ ಜಮಖಾನದ ಬಳಿ ನಿಂತಳು. ಎಲ್ಲರೂ ಅವಳನ್ನೇ ನೋಡಿದಾಗ, ಮಾಲತಿಯ ಕೆನ್ನೆಯರಂಗು ಏರಿತು.

"ಕೂತ್ಕೋಮ್ಮ" ಯಾರೋ ನುಡಿದಾಗ, ಢವ ಢವ ಎನುತ್ತಿದ್ದ ಎದೆಯ ಭಾರ ಕಡಿಮೆಯಾದಂತೆನಿಸಿತು. ಪಕ್ಕದಲ್ಲಿ ನಿಂತಿದ್ದ ರಾಗಿಣಿಯ ಕೈ ಹಿಡಿದೆಳೆದಳು. ರಾಗಿಣಿಯೂ ಅವಳ ಜತೆ ಕುಳಿತಳು.

ಎಲ್ಲರೂ ಆಗಾಗ್ಗೆ ಅವಳ ಕಡೆ ನೋಡಿ ನೋಡಿ ಏನೋ ಲೆಖ್ಖಾಚಾರ ಹಾಕುತ್ತಿರುವಂತೆ ಅನ್ನಿಸಿತು. ಮೋಹನ ಕಾಫಿ ಬಟ್ಟಲುಗಳ ಟ್ರೇ ತಂದು, ಎಲ್ಲರ ಮುಂದೆ ಹಿಡಿದ. ಮಾಲತಿಯ ಬಳಿ ಬಂದಾಗ,

"ಈಗಲೇ ಸರಿಯಾಗಿ ನೋಡಿ ಬಿಡು..... ಆಮೇಲೆ ಏನೂ ಅನ್ನಬೇಡ....."

ಮಾಲತಿ ಉತ್ತರಿಸಲಿಲ್ಲ. ಮೆಲ್ಲನೆ ಕತ್ತೆತ್ತಿ ವರನ ಕಡೆ ನೋಡಿದಳು. ಅವನೂ ನೋಡುತ್ತಿದ್ದುದರಿಂದ, ಸರ್ರನೆ ದೃಷ್ಟಿಯನ್ನು ಬದಲಾಯಿಸಿದಳು.

ಇದ್ದಕ್ಕಿದ್ದಂತೆ ಮಾಲತಿಯ ತಂದೆ, "ಮಾಲಾ, ಒಂದು ದೇವರ ನಾಮ ಹಾಡಮ್ಮಾ" ಎಂದಾಗ ಅವಳು ಬೆಚ್ಚಿದಳು. ಅದು ತೀರಾ ಅನಿರೀಕ್ಷಿತ. ಅಪ್ಪನ ಕಡೆ ದೈನ್ಯತೆಯಿಂದ ನೋಡಿದಳು. ನಾನು ಹೇಳಲಾಗುವುದಿಲ್ಲ ಎನ್ನುವಂತೆ.

"ಪರವಾಗಿಲ್ಲ ಹೇಳಮ್ಮಾ.... ನಮಗೆಲ್ಲ ಸಂಗೀತ ಎಂದರೆ ಬಹಳ ಇಷ್ಟ. ನಮ್ಮ ಮನೋಹರನೂ ಕಲಿತಿದ್ದಾನೆ.... ಅಲ್ಪ ಸ್ವಲ್ಪ....." ಅವನ ತಂದೆ ನುಡಿದಿದ್ದರು.

ಅವಳು ಮನೋಹರನ ಕಡೆ ನೋಡಿದಳು. ಅವನು ಮೆಚ್ಚುಗೆಯ ನೋಟವನ್ನು ಬೀರಿದಾಗ, ಅವಳಲ್ಲಿ ಉತ್ಸಾಹ ಮೂಡಿದಂತಾಯಿತು.

ಅಷ್ಟರಲ್ಲಿ ಮೋಹನ ಒಳಗಿನಿಂದ ತಂಬೂರಿಯನ್ನು ತಂದಿತ್ತ. ರಾಗಿಣಿ

ಅದನ್ನು ತನ್ನ ಕೈಗೆತ್ತಿಕೊಂಡು, ಒರಗಿಸಿಕೊಂಡು ತಂತಿಯನ್ನು ಮೀಟಲಾರಂಭಿಸಿದಳು.

"ರಾಗಿಣಿ, ನೀನೂ ನನ್ನ ಜತೆಗೆ ಹೇಳೇ...." ಮಾಲತಿ ಪಿಸುಗುಟ್ಟಿದಳು.

"ಇಲ್ಲ ಇಲ್ಲ" ಎಂದು ಅವಳು ತಲೆ ಆಡಿಸಿ, ಮೋಹನನ ಕಡೆ ನೋಡಿದಗ, ಅವನು ಹೇಳು ಎನ್ನುವಂತೆ ಸೂಚಿಸಿದ. ಮಾಲತಿ "ಗಜವದನ ಬೇಡುವೆ" ಎಂದು ಪ್ರಾರಂಭಿಸಿದಾಗ, ರಾಗಿಣಿಯೂ ದನಿಗೂಡಿಸಿದಳು.

ಭವಾನಮ್ಮ ಸಿಡಿಮಿಡಿಗೊಂಡು, ಎಲ್ಲರ ಕಡೆ ನೋಡಿದಾಗ, ಎಲ್ಲರ ದೃಷ್ಟಿಯೂ ಮಾಲತಿಯ ಕಡೆಗೆ ಇದ್ದುದನ್ನು ಗಮನಿಸಿ, ಸಮಾಧಾನಗೊಂಡಳು.

"ಒಂದು ಹೇಳಬಾರದು..... ಇನ್ನೊಂದು ಹೇಳು...." ನಾಗಪ್ಪನವರು ನುಡಿದಾಗ, ಮಾಲತಿ, ತುಂಟತನದಿಂದ "ಯಾರೇ ಬಂದವರು.... ಮನೆಗೆ ಮತ್ಯಾರೇ.... ಬಂದವರು ಪ್ರಾರಂಭಿಸಿದಳು. ಮೋಹನ ತಂಗಿಯ ಕಡೆ ನೋಡಿ ನಗೆ ಸೂಸಿದ."

ಈಗ ವರನ ಸರದಿ. ಅವನು ಯಾವ ಸಂಕೋಚವನ್ನು ತೋರಿಸದೇ,

"ತುಂಬಾ ಚೆನ್ನಾಗಿ ಹೇಳ್ತೀರಿ. ಇನ್ನೊಂದನ್ನು ಹೇಳಿಬಿಡಿ.... ಪ್ಲೀಸ್" ಎಂದ. "ನನಗಾಗಿ ಹೇಳಿ" ಎಂದು ಅವನು ಹೇಳಿದಂತೆ ಅನ್ನಿಸಿತು ಅವಳಿಗೆ.

ಮುಗುಳ್ನಗುತ್ತಾ "ಯಾವ ಮೋಹನ ಮುರಳಿ ಕರೆಯಿತು...." ಭಾವಗೀತೆಯನ್ನು ಹಾಡಿ, ಅವನ ಕಡೆ ನೋಡಿದಳು. ಅವನು ತಲೆತೂಗಿದ.

ಮೂರಾಯ್ತು ಅಂತ ನಾಲ್ಕು. ನಾಲ್ಕಾಯಿತು ಅಂತ ಇನ್ನೆರಡು. ಹೀಗೆ ಮಾಲತಿಯೂ ಸಂಭ್ರಮದಿಂದ ಆರೇಳು ಹಾಡುಗಳನ್ನು ಹಾಡಿ ಮುಗಿಸಿದಾಗ, ಎಲ್ಲರೂ ಚಪ್ಪಾಳೆ ತಟ್ಟಿ ಸಂತಸವನ್ನು ವ್ಯಕ್ತಪಡಿಸಿದರು. ರಾಗಿಣಿಗೆ ಮಾತ್ರ ಅಷ್ಟು ಹೊತ್ತು ಒಂದೇ ಕಡೆ ಕೂತು ಬೇಸರವಾಗಿತ್ತು. ಅಲ್ಲದೇ ತಂಬೂರಿ ತಂತಿ ಮೀಟಿ, ಅವಳ ಕೈ ಬೆರಳುಗಳು ನೋಯಿತ್ತಿದ್ದವು. ಮೋಹನನ ಕಡೆ, ಅಸಹಾಯಕಳಾಗಿ ನೋಡಿದಳು. ಅವನು ಸಂಜ್ಞೆಮಾಡಿ ಅವಳಿಗೆ ಏನನ್ನೋ ತಿಳಿಸಿದ. ಅವಳು ಏನು ಅರ್ಥ ಮಡಿಕೊಂಡಳೋ.?

ವರನ ತಾಯಿ ಭಾಗ್ಯಮ್ಮ....

"ತುಂಬಾ ಚೆನ್ನಾಗಿ ಹಾಡ್ತೀಯಮ್ಮ... ಒಂದು ಮಂಗಳ ಹಾಡಿಬಿಡು" ಎಂದರು ಒಂದು ಕಾರ್ಯಕ್ರಮಕ್ಕೆ ಮಂಗಳ ಹಾಡುವಂತೆ.

ತಕ್ಷಣ ಯಾವ ಹಾಡು ಹಾಡಲಿ ಎಂದು ಅವಳಿಗೆ ತಿಳಿಯದೇ,

ರಾಗಿಣಿಯ ಕಡೆ ನೋಡಿದಳು. ರಾಗಿಣಿಗೆ ಏನನ್ನಿಸಿತೋ ಏನೋ, ತಕ್ಷಣ ಹಿಂದೆ ಮುಂದೆ ನೋಡದೆ "ಜನಗಣಮನ ಅಧಿನಾಯಕ...." ಅಂತ ಪ್ರಾರಂಭಿಸಿಯೇ ಬಿಟ್ಟಳು.

ಎಲ್ಲರೂ ಕಕ್ಕಾಬಿಕ್ಕಿ. ಒಂದು ತರಹ ಗಲಿಬಿಲಿಯಿಂದ ಕೂತಿದ್ದವರೆಲ್ಲ ಎದ್ದು ನಿಂತರು. ಅವಳೊಬ್ಬಳೇ ಹೇಳುತ್ತಿದ್ದುದನ್ನು ಗಮನಿಸಿ ನಾಗಪ್ಪನವರೂ ಅವಳಿಗೆ ದನಿಗೂಡಿಸಿದರು. ಮಾಲತಿ ಗೊಂದಲಕ್ಕೊಳಗಾಗಿದ್ದಳು.

ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದು ತರಹ ಕೋಲಾಹಲ! ಇದ್ದಕ್ಕಿದಂತೆ ವಾತಾವರಣ ಅತಿ ಗಂಭೀರವಾಯಿತೆನಿಸಿತು. "ಜಯಹೇ.... ಜಯಹೇ...." ಮುಗಿಸುತ್ತಿದ್ದಂತೆಯೇ ರಾಗಿಣಿ ಅಲ್ಲಿಂದ ಮರೆಯಾಗಿದ್ದಳು. ಮಾಲತಿಗೆ ಮುಖಭಂಗವಾದಂತಾಗಿತ್ತು. ಮೋಹನ ಪೆಚ್ಚಾಗಿದ್ದ. ಭವಾನಮ್ಮ ತನ್ನಲ್ಲೇ ಅಸಹನೆಯಿಂದ ಗೊಣಗಿಕೊಂಡಳು. "ಅದಕ್ಕೇ ಈ ಕೋತೀನ ಯಾಕೆ ಕರೆದುಕೊಂಡು ಬಂದೆ ಅಂತ ಅಂದಿದ್ದು." ಅವಳ ತಂದೆ ಅಸಹಾಯಕರಂತೆ ಕೈ ಕೈ ಹೊಸೆದಾಗ, ನಾಗಪ್ಪನವರು, "ಹ್ಲಾ ಹ್ಲಾ" ಎಂದು ನಕ್ಕು ವಾತಾವರಣವನ್ನು ತಿಳಿ ಮಾಡಿದರು.

"ವೆರಿಗುಡ್, ವೆರಿಗುಡ್, ಯಾರು ಆ ಹುಡುಗಿ! ಬಹಳ ಚುರುಕಾಗಿದ್ದಾಳೆ."

ಎಲ್ಲರಿಗೂ ಹೋದ ಜೀವ ಬಂದಂತಾಯಿತು. ಎಲ್ಲರ ಮುಖದ ಮೇಲೂ ತಿಳಿನಗೆ ಮೂಡಿತ್ತು. ಅಷ್ಟರಲ್ಲಿ ಮಾಲತಿ ಒಳಗೆ ಹೊರಟುಹೋಗಿದ್ದಳು.

"ಏನೇ ರಾಗಿಣಿ ಅವಮಾನ ಮಾಡಿ ಬಿಟ್ಟೆಯಲ್ಲೆ....?" ರೇಗಿದಳು.

"ಸಾರಿ. ಮಾಲತಿ" ರಾಗಿಣಿ ಅಳತೊಡಗಿದಳು. ಅಷ್ಟರಲ್ಲಿ ಮೋಹನ ಒಳಗೆ ಬಂದು ರಾಗಿಣಿಯನ್ನು ಕರೆದ.

"ಅರೆ! ಯಾಕೆ ಅಳ್ತಿದೀಯಾ? ಯಾರು ಏನು ಅಂದ್ರು ಈಗ? ಏಯ್"

"ನಾನೇ... ನಾನು ಬೈದೆ ಅವಳನ್ನು" ಮಾಲತಿ ನುಡಿದಳು.

"ಛೇ! ಮಾಲತಿ..... ಯಾಕೆ ಬೈದೆ? ನಮ್ಮಗಿಣೇನ....?"

"ಮತ್ತೆ? ಎಂತಹ ಕೆಲಸ ಮಾಡಿ ಬಿಟ್ಟಳು? ಏನಂದುಕೊಳ್ತಾರೋ?"

"ಏನಾಯ್ತೀಗ? ಅವರುಗಳೇ ಎಲ್ಲರೂ ಸುಮ್ಮನಾಗಿದ್ದಾರೆ. ಯಾರಿಗೂ ಅಸಮಾಧಾನವಿಲ್ಲ. ನೋಡು, ಆತ ಇವಳನ್ನು ಕರೆದಿದ್ದಾರೆ, ಬಾ ರಾಗಿಣಿ.... ಬಾ...." ಕರೆದ.

"ನಾನು ಬರಲ್ಲ...." ರಾಗಿಣಿ ಹಿಂದೆ ಸರಿದಳು.

"ನೀನು ಬರದಿದ್ರೆ ನಾನು ಎತ್ತಿಕೊಂಡು ಹೋಗ್ತೀನಿ ಅಷ್ಟೆ" ನಕ್ಕ.

"ಹೋಗೇ ಸುಮ್ಮನೆ ಮತ್ತೆ ನಾಟಕ ಆಡಬೇಡ...." ಮಾಲತಿ ರೇಗಿದಾಗ ರಾಗಿಣಿ ಕಣ್ಣೊರೆಸಿಕೊಂಡು ಹೊರ ಬಂದಳು. "ಬಾಮ್ಮಾ...." ವಿಶ್ವಾಸದಿಂದ ನಾಗಪ್ಪನವರು ಅವಳನ್ನು ತಮ್ಮ ಬಳಿಗೆ ಕರೆದು, ತಲೆಯ ಮೇಲೆ ಕೈಯಾಡಿಸಿ,

"ನಿನ್ನ ಹೆಸರೇನು?" ಕೇಳಿದರು.

"ರಾಗಿಣಿ..." ಕತ್ತು ಬಗ್ಗಿಸಿ ಹೇಳಿದಳು.

"ಓಹೋ.... ರಾಗಿಣಿ....! ನಿನ್ನ ಹೆಸರಿನಲ್ಲಿ ಬೇರೆ ಬೇರೆ ಮೂರು ಪದಗಳನ್ನು ಮಾಡಬಹುದು ಗೊತ್ತೆ.....?"

"ಹುಂ..... ಗೊತ್ತು..."

"ಗಿಣಿ ತರಹ ಹಾಡ್ತೀಯ.... ಮುದ್ದಾಗಿ, ರಾಗಿ ತರಹ ಇದೀಯ ಚೆನ್ನಾಗಿ, ನನಗೆ ಇನ್ನೊಬ್ಬ ಮಗ ಇದ್ದಿದ್ದರೆ, ನೀನು ರಾಗಿ ತರಹ ಇದ್ದರೂ ಪರವಾಗಿಲ್ಲ ಅಂತ ನಿನ್ನನ್ನೇ ಸೊಸೆಯನ್ನಾಗಿ ಮಾಡಿ ಕೊಳ್ತಿದ್ದೆ." ಆತ ಜೋರಾಗಿ ನಕ್ಕಾಗ, ಎಲ್ಲರೂ ಪೆದ್ದು ಪೆದ್ದಾಗಿ ಅವರ ಕಡೆ ನೋಡಿದರು.

"ವೆರಿಗುಡ್. ನೀನು ಧೈರ್ಯವಂತೆ. ಪಾಪ ಆ ಹುಡುಗಿಗೂ ಹಾಡಿ ಹಾಡಿ ಸುಸ್ತಾಗಿರಬೇಕು. ಇಬ್ಬರೂ ಸೇರಿ ಕಾರ್ಯಕ್ರಮ ಚೆನ್ನಾಗಿ ನಡೆಸಿಕೊಟ್ಟಿರಿ. ಒಂದು ಒಳ್ಳೆಯ ಸಂಗೀತ ಕಾರ್ಯಕ್ರಮಕ್ಕೆ ಬಂದ ಅನುಭವವಾಯಿತು." ಧನ್ಯರಾದವರಂತೆ ನುಡಿದಿದ್ದರು.

ಅವರ ಮಾತಿನಲ್ಲಿ ವ್ಯಂಗ್ಯವಿದೆಯೇ ಎಂದು ಭವಾನಮ್ಮ ಹಾಗೂ ಅವರ ಪತಿ ಚಿಂತಿಸುತ್ತಿದ್ದರು.

"ಹುಂ. ನಾವಿನ್ನು ಬರೋಣವೇ.... ಅಪ್ಪಣೆಯಾಗಲಿ...." ಆತ ನುಡಿದಾಗ ಎಲ್ಲರೂ ಹೊರಡುವ ತವಕ ತೋರಿದರು. ಭಾಗ್ಯಮ್ಮ ಒಳಗೆ ದೇವರ ಮುಂದೆ, ಅರಿಶಿನ, ಕುಂಕುಮ, ಹೂವು ಹಣ್ಣುಗಳನ್ನಿಟ್ಟು ಬಂದಳು. ಸಮಯ ಸಾಧಿಸಿ, ಭವಾನಮ್ಮ..... "ದಯವಿಟ್ಟು ಏನು ತಿಳಿದುಕೊಳ್ಳಬೇಡಿ. ಆ ಹುಡುಗಿ ಬುದ್ಧಿ ಸ್ವಲ್ಪ ಹಾಗೇ ಅಂತ ತಿಳಿದಿದ್ದೂ, ನಾವು ಅವಳನ್ನು ಕೂರಿಸಿದ್ದು ತಪ್ಪು. ದಯವಿಟ್ಟು ಕ್ಷಮಿಸಿ"

"ಕ್ಷಮಿಸುವಂಥಾದ್ದು ಏನಿದೆ! ನಮ್ಮವರು ಮೆಚ್ಚಿಗೆಯಿಂದ ನುಡಿದ ಮೇಲೆ ಆಯ್ತು.... ನಮಗೆ ಯಾವ ತಪ್ಪು ಭಾವನೆಯಾ ಇಲ್ಲ....."

"ಹಾಗಾದ್ರೆ...." ಭವಾನಮ್ಮನ ಕಣ್ಣಲ್ಲಿ ಆಸೆಯ ಮಿಣುಕನ್ನು ಕಂಡರು.

"ಮನೋಹರನ ಹತ್ತಿರ ಮಾತನಾಡಿ. ನಾಳೆ ನಾಡಿದ್ದರಲ್ಲಿ ತಿಳಿಸುತ್ತೇವೆ" ಆಕೆ ಅವರ ಮಾತನ್ನು ಅರ್ಧಕ್ಕೇ ಕತ್ತರಿಸಿ ನುಡಿದಾಗ, ಆಕೆಗೆ

ಅಧೈರ್ಯವುಂಟಾಯಿತು.

ಜಾಣತನದ ಮಾತು ಎಂದುಕೊಂಡರೂ , ಲಗುಬಗೆಯಿಂದ ಆಕೆಗೆ ಅರಿಶಿನ ಕುಂಕುಮ ತಂಬೂಲಗಳನ್ನಿತ್ತು ಗೌರವಿಸಿದಳು.

ಮತ್ತೊಮ್ಮೆ ಮಾಲತಿಯನ್ನು ನೋಡುವ ಬಯಕೆಯಿಂದ ಮನೋಹರ ಅತ್ತಿತ್ತ ಕಣ್ಣು ಹಾಯಿಸಿದ್ದನ್ನು ಗಮನಿಸಿದ, ಮೋಹನ ಅವಳನ್ನು ಕರೆಯಲು ಹೋದ.

"ಮಾಲಾ... ಮನೋಹರ ಕರೀತಿದ್ದಾರೆ ಬಾ" ಎಂದ. ಮಾಲತಿ ಸಂಭ್ರಮದಿಂದ ಹೊರಗೆ ಹೊರಟರೂ, ಕಾಲುಗಳು ಬಾಗಿಲ ಬಳಿಯಲ್ಲೇ ನಿಂತವು. ಮನೋಹರ ಕಣ್ಣಿನಲ್ಲೇ 'ಬರ್ತೀನಿ' ಎಂದು ಸೂಚಿಸಿದಾಗ ಅವಳು ತಲೆ ಆಡಿಸಿದಳು.

ಗಂಡಿನವರು, ಮತ್ತೊಮ್ಮೆ ಎಲ್ಲರಿಗೂ ಹೇಳಿ, ಹೊರಟರು. ಮುಂದೆ ಮನೆಯಲ್ಲಿ ನಡೆಯಬಹುದಾದ ಗಲಾಟೆಯನ್ನು ಊಹಿಸಿ ಮೋಹನ ತಕ್ಷಣ ರಾಗಿಣಿಯನ್ನು ಹೊರಡಿಸಿದ.

"ರಾಗಿಣಿ, ಹೊರಡು, ನಿನ್ನನ್ನು ಮನೆಗೆ ಬಿಟ್ಟು ಬರ್ತೀನಿ"

ಅವಳಿಗೂ ಹೊರಟರೆ ಸಾಕು ಎನಿಸಿದ್ದರಿಂದ, ಯಾರಿಗೂ ಹೇಳದೇ ಅವನ ಹಿಂದೆ ಹೊರಟಳು. ಅವಳು ಅವಳ ಮನೆ ಮುಂದೆ ಇಳಿದ ನಂತರ ಕೇಳಿದ,

"ಅದೇಕೆ ಇದ್ದಕ್ಕಿದ್ದ ಹಾಗೆ ರಾಷ್ಟ್ರಗೀತೆ ಹಾಡಿದೆ?"

"ಯಾವುದೋ ಫಂಕ್ಷನ್ ಬಗ್ಗೆ ಯೋಚಿಸ್ತಿದ್ದೆ.....ಕಾರ್ಯಕ್ರಮದ ಕಡೆಯಲ್ಲಿ ರಾಷ್ಟ್ರಗೀತೆ ಹಾಡಲ್ವೇ? ಸಾರಿ ಮೋನ..... ನನ್ನದು ತಪ್ಪಾಯಿತು...." ಅಳುವಿನ ಧ್ವನಿ.

"ಹೋಗಲಿ ಬಿಡು..... ಹೀಗೆ ಆಯ್ತು ಅಂತ ನೀನು ಮನೇಲಿ ಯಾರಿಗೂ ಹೇಳಬೇಡ. ಎಲ್ಲರೂ ನಿನ್ನನ್ನೇ ಬೈತಾರೆ...."

"ಮಧುದೇ ತಪ್ಪು. ಮಾಲತಿ ಕರೆದಿದ್ದು ಅವಳನ್ನೇ, ನನ್ನನ್ನು ಕಳಿಸಿದ್ಲು"

"ಹೋಗಲಿಬಿಡು. ಅವಳು ಬರದೇ ಇದ್ದುದೇ ಒಳ್ಳೇದಾಯ್ತು"

ಅವನೇಕೆ ಹಾಗೆ ಹೇಳಿದ ಎಂದು ಅವಳಿಗೆ ತಿಳಿಯಲಿಲ್ಲ.

"ಹೇಗೂ ಬಂದಿದೀನಲ್ಲ. ನಿಮ್ಮ ತಂದೇನ ಮಾತನಾಡಿಸಿಕೊಂಡು ಬರ್ತೀನಿ ನಡಿ" ಎನ್ನುತ್ತಾ ಅವರ ಮನೆ ಒಳಗೆ ಬಂದ. ರಾಗಿಣಿಯ ತಂದೆ ಶೇಷಾದ್ರಿ ಕೂತಿದ್ದರು. ಇನ್ಯಾರೂ ಇದ್ದಂತೆ ಕಾಣಿಸಲಿಲ್ಲ. ಅವರ ಯೋಗಕ್ಷೇಮ

ವಿಚಾರಿಸಿ, ಅಲ್ಲಿಂದ ನಡೆದ.

ಎರಡು ಮೂರು ದಿನಗಳಾದರೂ, ಗಂಡಿನ ಮನೆಯವರಿಂದ ಒಪ್ಪಿಗೆಯ ಮಾತು ಬರದಿದ್ದಾಗ, ಭವಾನಮ್ಮನ ಗೊಣಗಾಟ ಪ್ರಾರಂಭವಾಯಿತು.

"ನನಗೆ ಗೊತ್ತಿತ್ತು. ಹೀಗೇ ಆಗುತ್ತೆ ಅಂತ.... ತಲೆ ಹರಟೆ ಜನ ಅಂತ ಅಂದುಕೊಂಡಿರ್ತಾರೆ. ಅವತ್ತೇ ಹೇಳಿದೆ. ಯಾರಿಗೂ ಹೇಳಬೇಡ ಈಗಲೇ ಅಂತ. ನನ್ನ ಮಾತನ್ನೆಲ್ಲಿ ಕೇಳಿದ್ಲು! ಹೋಗಿ ಅದನ್ನು ಕರೆದುಕೊಂಡು ಬಂದಳು. ಅದರ ಮುಖ ನೋಡಿದರೆ ರೇಗುತ್ತೆ ನನಗೆ....."

"ಅಮ್ಮ..... ಸುಮ್ಮನೇ ಯಾಕೆ ಮಾತನಾಡಿ ಬಾಯನ್ನು ಒಣಗಿಸಿ ಕೊಳ್ತೀಯಾ! ಅವರುಗಳು ನಗುನಗುತ್ತಾನೇ ಹೋಗಲಿಲ್ವೆ?"

"ನೀನೊಬ್ಬ... ಆ ಹುಡುಗಿಗೇ ಸಪೋರ್ಟ್ ನೀನು. ಅವರೇನು ಸಂಸ್ಕೃತಿ ಇಲ್ಲದವರೇ, ಎಲ್ಲರೆದುರಿಗೆ ಅಸಮಾಧಾನ ತೋರಿಸಲಿಕ್ಕೆ?"

"ಸರಿ ಮತ್ತೆ. ನಿನಗೇಕೆ ಅಸಮಾಧಾನ?"

"ಅವರುಗಳು, ಅವಮಾನವಾಯ್ತು ಅಂತ ನಮ್ಮ ಮಾಲತಿಯನ್ನು ಒಪ್ಪದೇ ಹೋದರೆ?"

"ಒಪ್ಪದಿದ್ದರೇನೀಗ? ಇನ್ನೊಂದು ಹುಡುಗನ್ನ ನೋಡಿದರಾಯ್ತು"

"ಹಾಗಲ್ಲ.... ಇವರು ಎಲ್ಲಾ ರೀತಿಯಿಂದಲೂ ನಮ್ಮ ಮಾಲತಿಗೆ ಸರಿಯಾಗಿದ್ದರು...... ನೀನು ಅವರ ಮನೆ ತನಕ ಹೋಗಿ ಕೇಳಿಕೊಂಡು ಬರ್ತೀಯಾ?"

"ನಾನು? ನಾನು ಹೇಗಮ್ಮ ಹೋಗಿ ಕೇಳಲಿ! ಅಪ್ಪನ್ನ ಕಳಿಸು..... "

"ಅವರು ಹೋಗುವುದಿಲ್ಲ. ಅವರಾಗಿಯೇ ತಿಳಿಸಲಿ ಅವಾಂತರವೇನು ಅಂತ ಅಂದ್ರು"

"ಸರಿ ಮತ್ತೆ, ಅವಾಂತರವೇನು!"

"ನಿಮಗೆ ಯಾರಿಗೂ ಅರ್ಥವಾಗುವುದಿಲ್ಲ. ಒಪ್ಪಿದೀನಿ ಅಥವಾ ಇಲ್ಲ ಅಂತ ಅನ್ನಕ್ಕೆ ಅವರಾದ್ರೂ ಸರಿ, ತಡವೇಕೆ ಮಾಡಬೇಕು?"

"ಬಹುಶಃ ಒಪ್ಪಿದಾರೆ. ಅದಕ್ಕೇ ಸುಮ್ಮನಿದ್ದಾರೆ"

"ಒಪ್ಪದೇನೂ ಇರಬಹುದು. ಅದನ್ನು ಹೇಗೆ ತಿಳಿಸುವುದು ಅಂತ ಸುಮ್ಮನಿದಾರೋ ಏನೋ.... ನೀನು ಹೋಗಿದ್ದರೆ ಚೆನ್ನಾಗಿತ್ತು"

"ಚೆನ್ನಾಗಿದೆ ನಿನ್ನ ತರ್ಕ..... ನಾವೇ ಏಕೆ ಹೋಗಿ ಕೇಳಬೇಕು?"

"ಎಷ್ಟಾಗಲಿ ಅವರು ಗಂಡಿನವರು"

"ಗಂಡಿನವರಾದರೇನು! ಅವರಿಗೆ ಹೆಣ್ಣು ಬೇಕಾದುದರಿಂದ ತಾನೇ ನಮ್ಮ ಮನೆ ತನಕ ಬಂದಿದ್ದು. ಅವರಾಗಿಯೇ ಬಂದು ನಿರ್ಣಯ ತಿಳಿಸಲಿ"

"ನಿಮಗ್ಯಾರಿಗೂ ನನ್ನ ತವಕ ಅರ್ಥವಾಗುವುದಿಲ್ಲ. ಏನಾದ್ರೂ ಮಾಡ್ಕೊಳ್ಳಿ"

ಅವರು ಸಿಡಿದು, ಅಲ್ಲಿಂದ ನಡೆದಾಗ, ಮೋಹನ ಮುಗುಳ್ನಕ್ಕ.

ಈ ಅಮ್ಮನ ಲಾಜಿಕ್ ಅರ್ಥವಾಗುವುದೇ ಇಲ್ಲಯಾರಿಗೂ....

ಅವನು ಆಫೀಸಿಗೆ ಹೊರಟುನಿಂತಾಗ, ಸಿದ್ಧವಾಗಿದ್ದ ಮಾಲತಿ ಬಂದಳು.

"ನನ್ನನ್ನ ಮಧುರನ ಮನೆ ಹತ್ತಿರ ಡ್ರಾಪ್ ಮಾಡ್ತೀಯಾ?"

"ಅಬ್ಬಾ.....! ನಾನು, ನೀನೇ ಮನೋಹರನ ಮನೆಗೆ ಹೊರಟುಬಿಟ್ಟೆ ಯೇನೋಂತ ಅದ್ಕೊಂಡೆ."

"ಹುಂ. ನಾನ್ಯಾಕೆ ಹೋಗಲಿ, ಬೇಕಿದ್ದರೆ ಅವರೇ ಬರ್ತಾರೆ"

"ಅದೀಗ ಜಾಣತನದ ಮಾತು. ಈ ಮಾತು ಅಮ್ಮನಿಗೆ ಅರ್ಥವಾಗುವುದೇ ಇಲ್ಲ. ಸರಿ ನಿನಗೆ ಮನೋಹರ ಒಪ್ಪಿಗೆಯಾದ್ನಾ?"

"ಒಪ್ಪದಿರುವಂತಹ ಅವಲಕ್ಷಣ ಏನೂ ಕಾಣಲಿಲ್ಲ ನನಗೆ..... ಅವನಿಗೆ ನಾನು ಒಪ್ಪಿಗೆಯಾದೆನೋ ಇಲ್ಲವೋ ಯಾರಿಗೆ ಗೊತ್ತು! ಬೇರೆ ಯಾರಾದ್ರೂ ನನಗಿಂತ ಚೆನ್ನಾಗಿರುವವಳು ಒಪ್ಪಿಗೆ ಯಾಗಿರಬಹುದು"

"ಹುಂ, ಹಾಗಿರಲಾರದು. ನೀನು, ಹೋಗಿ ಕೇಳಿಕೊಂಡು ಬಾ ಅಂತ ಅಂದರೆ ನಾನು ಅವನ ಮನೆಗೆ ಹೋಗಿ ಬರ್ತೀನಿ..... ನಿನಗೋಸ್ಕರ"

"ನನಗೇನೂ ಅರ್ಜೆಂಟಿಲ್ಲ ಮದುವೆಗೆ. ನನ್ನ ಮದುವೆಯಿಂದ ನಿನಗೆ ಲಾಭವಿದ್ದರೆ...... ಹ್ಞೂ ಸರಿ......"

"ನನಗೂ ಏನೂ ಅರ್ಜೆಂಟಿಲ್ಲ. ನಿನಗೆ ನಿರಾಸೆಯಾಗದಿರಲಿ ಅಂತ"

"ನನ್ನ ಮದುವೆ ಆಗಲಿ ಅಂತ ಕಾಯಬೇಡ ಮೋನ... ನಿನಗೆ ಒಪ್ಪಿಗೆಯಾದವಳು ಸಿಕ್ಕಾಗ ಜುಂ ಅಂತ ಮದುವೆಯಾಗಿಬಿಡು"

"ನನ್ನ ಮದುವೆ ಮಾತೇಕೆ ಈಗ? ಮೊದಲು ನಿನ್ನ ಮದುವೆ ಆಗಲಿ. ಮಾತುಕತೆ ನಡೆಯುತ್ತಿರುವುದು ನಿನ್ನ ಮದುವೆಯದೇ" ಇದ್ದಕ್ಕಿದ್ದಂತೆ ಅವನು ರೇಗಿ ನುಡಿದಾಗ ಅವಳು ಅವಾಕ್ಕಾದಳು. ತಮಾಷೆಯಾಗಿ ಮಾತನಾಡುತ್ತಿದ್ದವನಿಗೆ ಇದ್ದಕ್ಕಿದ್ದಂತೆ ಏನಾಯ್ತು? ಎಂದುಕೊಂಡು ಸ್ಕೂಟರನ್ನೇರಿದಳು. ಅವನು ಏನೂ ಮಾತನಾಡದೇ ಅವಳನ್ನು ಸ್ನೇಹಿತೆಯ ಮನೆಯ ಮುಂದೆ ಇಳಿಸಿ, ಮನೋಹರನ ಮನೆ ದಾರಿ ಹಿಡಿದ.

ಮನೆಯಲ್ಲಿ ಮನೋಹರ, ಅವನ ಮತ್ತೊಬ್ಬ ಸ್ನೇಹಿತ ಕೇಶವ ಕುಳಿತು

ಹರಟೆ ಹೊಡೆಯುತ್ತಿದ್ದರು. ಮನೋಹರನನನ್ನು ಮುಗುಳ್ನಗುತ್ತಾ ಬರಮಾಡಿಕೊಂಡ. ಅವನು ಬಂದ ಕಾರಣವನ್ನು ಊಹಿಸಿದ್ದ.

"ನನ್ನ ತಂದೆ ತಾಯಿ ಊರಲಿಲ್ಲ. ನಾಳೆ ಬರ್ತಾರೆ. ಆಮೇಲೆ ನಿಮ್ಮ ಮನೆಗೆ ಹೇಳಿಕಳಿಸೋಣ ಅಂತ ಮಾತನಾಡಿ ಕೊಂಡಿದ್ದೆವು."

'ಏನಂತ?' ಅಂತ ಇವನು ಕೇಳಲಿಲ್ಲ. ಅವನ ತವಕ ಹೆಚ್ಚಾಗಿತ್ತು.

"ನಿಮ್ಮ ತಂಗಿ ಹತ್ತಿರ ಸ್ವಲ್ಪ ಮಾತನಾಡಬೇಕಾಗಿತ್ತು....."

"ಬನ್ನಿ. ಅದಕ್ಕೇನಂತೆ!"

"ಅವರನ್ನೇ ಕರೆದುಕೊಂಡು ಬಂದಿದ್ದರೆ..... ಚೆನ್ನಾಗಿತ್ತು"

ಅಷ್ಟರಲ್ಲಿ ಕೇಶವ ಬಾಯಿಹಾಕಿದ.

"ಬೇಡ ಕಣೋ.... ಮದುವೆಗೆ ಮುಂಚೆ ಹಾಗೆಲ್ಲಾ ಯಾವ ಯಾವುದೋ ದಿನಗಳಲ್ಲಿ ಹೆಣ್ಣು ಮಕ್ಕಳನ್ನು ಕಳಿಸುವುದಿಲ್ಲ. ನಿಮ್ಮಪ್ಪ ಅಮ್ಮ ಬರಲಿ. ಈ ಹತ್ತುದಿನ ಕಳೆದುಹೋಗಲಿ...."

'ಯಾವ ಹತ್ತು ದಿನ! ಎಲ್ಲಿಗೆ ಹೋಗಿದ್ದಾರೆ? ಏನಾಗಿದೆ' ಎಂದು ಕೇಳುವ ಧೈರ್ಯ ಬರಲಿಲ್ಲ.

"ಪರವಾಗಿಲ್ಲ. ನಮ್ಮ ಮನೆಗೆ ಬನ್ನಿ. ಅಲ್ಲೇ ಮಾತನಾಡಬಹುದು"

"ಸಾಯಂಕಾಲ ಬರಲಾ?" ಅವನು ಉತ್ಸಾಹದಿಂದ ಕೇಳಿದಾಗ, ಮೋಹನನಿಗೆ ಸಂತಸವಾಗಿತ್ತು. ಇದು ಒಪ್ಪಿಗೆಯ ಸೂಚನೆ ಎಂದರಿತ. ಅವರಿಬ್ಬರಿಗೂ ಹೇಳಿ ಮತ್ತೆ ಮನೆಯ ಕಡೆ ಹೊರಟ.

ದಾರಿಯಲ್ಲಿ ಒಂದು ಅಂಗಡಿಯಲ್ಲಿ ಒಂದಿಷ್ಟು ಸ್ವೀಟ್ಸ್‌ಗಳನ್ನು ಕಟ್ಟಿಸಿಕೊಂಡು, ಹಾಗೇ ಆಫೀಸಿಗೆ ಫೋನು ಮಾಡಿ, ಸ್ವಲ್ಪ ತಡವಾಗಿ ಬರುತ್ತಿದ್ದೇನೆಂದು, ಸಹೋದ್ಯೋಗಿಗೆ ತಿಳಿಸಿ, ಮನೆಗೆ ಬಂದ.

ಅರ್ಧಗಂಟೆಯಲ್ಲೇ ವಾಪಸ್ಸಾದವನನ್ನು ಕಂಡು, ಅವರಿಬ್ಬರಿಗೂ ಗಾಭರಿ ಯಾಯಿತು. ಅಲ್ಲದೇ ಮಾಲತಿಯೂ ಇಲ್ಲ.... ಮೋಹನ ನಿಧಾನವಾಗಿ ಎಲ್ಲಾ ಹೇಳಿದ.

"ಇವತ್ತು ಸಾಯಂಕಾಲ ಬರ್ತಾರೆ..... ಮಾಲತಿಯ ಜತೆ ಮಾತನಾಡಕ್ಕೆ ಅಂತ. ನೀನಾಗೇ ನೀನು ಏನನ್ನೂ ಕೇಳಬೇಡ ಸುಮ್ಮನಿದ್ದುಬಿಡು"

"ಸರಿ. ನನಗೇನು ಅಷ್ಟು ತಿಳಿಯಲ್ವೆ! ಅವಳು.... ಬಂದಿಲ್ಲವಲ್ಲ. ಹಾಗೇ ಹೋಗ್ತಾ ಅವಳಿಗೆ ಹೇಳಿ, ಬೇಗ ಬಾ ಅಂತ ಹೇಳು"

"ಸರಿ, ಇವತ್ತೆಲ್ಲಾ ತಿರುಗ್ತಾನೇ ಇರ್ತೀನಿ" ಎಂದರೂ, ಸ್ಕೂಟರನ್ನು

ಮಧುರನ ಮನೆ ಕಡೆಗೆ ಓಡಿಸಿದ.

ಬಾಗಿಲನ್ನು ತೆಗೆದವಳು ಮಧುರ. ಗೊಂದಲಗೊಂಡ ಅವನ ಮುಖವನ್ನು ನೋಡಿ "ಬನ್ನಿ" ಎಂದಳು ಮುಗುಳ್ನಗುತ್ತಾ.

"ಇಲ್ಲ. ಆಫೀಸಿಗೆ ಹೋಗಬೇಕು. ಮಾಲತಿಗೆ ಹೇಳಿಬಿಡಿ..... ಬೇಗ ಮನೆಗೆ ಹೋಗಬೇಕಂತೆ...." ಅಷ್ಟರಲ್ಲಿ ಮಾಲತಿಯೂ ಬಂದು ನಿಂತಿದ್ದಳು. ಮತ್ತೊಮ್ಮೆ ಅವಳಿಗೆ ಅದನ್ನೇ ಹೇಳಿ, ಹೊರಟ.

ಸ್ವಲ್ಪ ಹೊತ್ತಿನ ನಂತರ ಮಾಲತಿ ಬಲವಂತ ಪಡಿಸಿ, ಸ್ನೇಹಿತೆಯನ್ನು ಹೊರಡಿಸಿದಳು. ಇಬ್ಬರನ್ನು ಒಟ್ಟಿಗೆ ನೋಡಿದ ಭವಾನಮ್ಮನ ಹುಬ್ಬುಗಳು ಗಂಟಿಕ್ಕಿದವು. ಅದನ್ನು ಅರಿತ ಮಧುರ, ಸ್ವಲ್ಪ ಹೊತ್ತಿನಲ್ಲೇ ಹೊರಟಳು.

"ಸಂಗೀತದ ಪ್ರಾಕ್ಟೀಸ್ ಮಾಡಬೇಕು ಹೊರಡ್ತೀನೆ" ಎಂದಳು.

"ಪರವಾಗಿಲ್ಲ ನಾಳೆ ಮಾಡಿದರಾಯ್ತು" ಎಂದು ಮಾಲತಿ ನುಡಿದಾಗ, ಭವಾನಮ್ಮ ತಟ್ಟನೇ ನುಡಿದಳು:

"ನಿನಗಂತೂ ಆಸಕ್ತಿ ಇಲ್ಲ. ಚೆನ್ನಾಗಿ ಅಭ್ಯಾಸ ಮಾಡುವವಳನ್ನು ಏಕೆ ಬೇಡ ಅಂತೀಯ..... ಮಾಡಲಿ ಬಿಡು"

ಮಾಲತಿ ತಾಯಿಯನ್ನು ದುರದುರನೆ ನೋಡಿದಳು.

"ಸಾರಿ ಕಣೇ.... ಬೇಜಾರು ಮಾಡ್ಕೋಬೇಡ"

"ಬೇಜಾರ್‍ಯಾಕೆ? ನಿನಗಾದರೆ, ಹೊಂಗನಸು ಕಾಣುತ್ತಾ ಸಮಯ ಕಳೆಯಲು ಸಂಗಾತಿ ಸಿಕ್ಕಿದ್ದಾರೆ. ನನಗೀಗ ಸಂಗೀತವೇ ಸಂಗಾತಿ"

"ಏಯ್.... ನನಗಿನ್ನು ಸಿಕ್ಕಿಲ್ಲ. ನನ್ನದು ಸೆಟ್ಲ್ ಆದ ಕೂಡಲೇ, ನಿನಗೂ ಒಬ್ಬ ಸಂಗಾತೀನ ಹುಡುಕಿ ಕೊಡ್ತೀನಿ ನೋಡ್ತಿರು"

"ಸದ್ಯಕ್ಕೆ ನನಗೆ ಬೇಡಮ್ಮ..... ನಾನು ಹಾಯಾಗಿದೀನಿ. ಬರ್ಲಾ?" ಎನ್ನುತ್ತಾ ಅವಳು ಹೊರಟೊಡನೆ, ಭವಾನಮ್ಮ ಮಗಳ ಎದುರಿಗೆ ಪ್ರತ್ಯಕ್ಷಳಾದಳು.

"ನಿನಗಂತೂ ಹೊತ್ತು ಗೊತ್ತು ಸಮಯ ಸಂದರ್ಭ ಒಂದೂ ತಿಳಿಯಲ್ಲವಲ್ಲೇ.... ಸದಾ ಮಧುರ, ಮಧುರ. ನಿನ್ನ ಗಂಡನ ಮನೆಗೂ ಕರೆದುಕೊಂಡು ಹೋಗ್ತೀಯಾ ಅವಳನ್ನ?"

"ನನ್ನ ಗಂಡನ ಮನೆಗೆ ಅವಳೇಕೆ ಬರ್ತಾಳೆ! ಅವಳ ಗಂಡನ ಮನೆಗೆ ಅವಳು ಹೋಗ್ತಾಳೆ....."

"ಸರಿ. ಮತ್ತೆ ಅವಳ ಚಿಂತೆ ಕಡಿಮೆಮಾಡು. ಆ ಹುಡುಗ ಸಾಯಂಕಾಲ ಬರ್ತೀನಿ ಅಂತ ಹೇಳಿ ಕಳಿಸಿದಾನಂತೆ. ಊಟ ಮಾಡಿ, ಮಲಗಿ ಏಳು.

ಅವನು ಬರುವ ಹೊತ್ತಿಗೆ ಸಿದ್ಧವಾಗಿರಬೇಕು."

"ಹೌದೇನಮ್ಮ... ಮೊದಲೇ ಹೇಳಿದಿದ್ರೆ..... ಮಧುರನ್ನ ಇರು ಅಂತ ಹೇಳಬಹುದಾಗಿತ್ತು. ಇಬ್ಬರಿಗೂ ಪರಿಚಯ ಮಾಡಿಸಿಕೊಡ್ತಿದ್ದೆ."

"ನಿನ್ನ ತಲೆ. ಸದ್ಯ ತೊಲಗಿದಳಲ್ಲ, ಒಳ್ಳೆಯದಾಯ್ತು ಬಿಡು"

"ಅಮ್ಮ.... ಅವಳು ನನ್ನ ಸ್ನೇಹಿತೆ... ನಿನಗೇಕೆ ಅವಳ ಮೇಲೆ ಸಿಟ್ಟು!"

"ಅವಳ ಮೇಲೆ ಸಿಟ್ಟಿಲ್ಲ ಕಣೇ.... ಅವಳ ರೂಪದ ಮೇಲೆ"

"ಅಂದ್ರೆ.... ಅವಳು ನನಗಿಂತ ಚೆನ್ನಾಗಿದಾಳೆ ಅಂದ ಮಾತ್ರಕ್ಕೆ ನೀನೇಕೆ ಅವಳನ್ನು ದ್ವೇಷಿಸಬೇಕು?"

"ಅದೆಲ್ಲಾ ನಿನಗೆ ಅರ್ಥವಾಗಲ್ಲ ಬಿಡು"

"ಅರ್ಥವಾಗದೇ ಏನಿಲ್ಲ ಬಿಡು. ಆ ಹುಡುಗ ನನ್ನ ಬದಲು ಅವಳನ್ನು ಒಪ್ಪಿದರೆ ಅಂತ ತಾನೆ ನಿನಗೆ ಹೆದರಿಕೆ! ಹಾಗೇನಾಗಲ್ಲ ಬಿಡು..... ಮಧುರ ಖಂಡಿತಾ ಅವನ ಪತ್ನಿಯಾಗುವುದು ಸಾಧ್ಯವಿಲ್ಲ"

"ಸಾಕು. ನಿನಗೇ ಎಲ್ಲಾ ಗೊತ್ತು ಎನ್ನುವ ತರಹ ಮಾತನಾಡಬೇಡ. ನಿನಗೆ ಇನ್ನೂ ಅನುಭವ ಸಾಲದು.... ನಡೀ ಊಟಕ್ಕೇಳು"

ಮಾಲತಿ, ಸ್ನೇಹಿತೆ ಹೊರಟು ಹೋದದ್ದಕ್ಕೆ ಪರಿತಪಿಸಿದಳು. ಮೋಹನ ಆಗಲೇ ಅವರ ಮನೆಯಲ್ಲೇ ಹೇಳಿದ್ದರೆ ಏನಾಗುತ್ತಿತ್ತು! ಇವಳು ಬರುತ್ತಿದ್ದಳೋ ಇಲ್ಲವೋ.... ಹೋಗಲಿ ಇನ್ನೇನು ಮಾಡೋಕಾಗುತ್ತೆ! ಈ ಮಹಾಶಯ ಬಂದು ಏನು ಮಾತನಾಡ್ತಾನೋ..... ಆಮೇಲೆ ಒಂದಲ್ಲ ಒಂದು ದಿನ ಇಬ್ಬರ ಪರಿಚಯ ಮಾಡಿಕೊಡಲೇ ಬೇಕಾಗುತ್ತದೆ. ಎಂದುಕೊಂಡು ಒಂದೆರಡು ತುತ್ತು ಉಂಡ ಶಾಸ್ತ್ರಮಾಡಿ ಎದ್ದಳು.

"ಏಕೆ ಸರಿಯಾಗಿ ಊಟಾನೇ ಮಾಡಲಿಲ್ಲವಲ್ಲೇ...."

"ಅವರ ಮನೆಯಲ್ಲಿ ತಿಂಡಿ ತಿಂದಿದ್ದೆ. ಹುಳಿಯವಲಕ್ಕಿ ಕೊಟ್ಟಿದ್ದರು. ತುಂಬಾ ಚೆನ್ನಾಗಿತ್ತು. ಚೆನ್ನಾಗಿ ತಿಂದೆ" ತಾಯಿಯ ಕಡೆ ನೋಡಿದಳು.

ಅದಕ್ಕೆ ಅವಳು ಏನೂ ಹೇಳಲಿಲ್ಲ. ಮಾಲತಿ ಎದ್ದು ಕೈ ತೊಳೆದಳು. ಮಲಗಿ, ಮನೋಹರ ಏನು ಹೇಳಬಹುದು ಎಂದು ಯೋಚಿಸುತ್ತಾ ಕಾಲ ಕಳೆದಳು.

ಆಫೀಸಿನಿಂದ, ಮೋಹನ ದಿನಕ್ಕಿಂತ ಸ್ವಲ್ಪ ಬೇಗ ಬಂದ. ಭವಾನಮ್ಮ ತಿಂಡಿ ಕಾಫಿ ಸಿದ್ಧವಾಗಿಟ್ಟುಕೊಂಡು, ಮನೋಹರನಿಗಾಗಿ ಕಾದಳು. ಕಡೆಗೂ ಮನೋಹರ ತನ್ನ ಸ್ನೇಹಿತ ಮಾಧವನ ಜತೆಯಲ್ಲಿ ಬಂದ. ಅವನೊಬ್ಬನೇ

ಬಂದುದು ಹಿತವೆನಿಸಲಿಲ್ಲ ಭವಾನಮ್ಮನಿಗೆ. ಅವನ ತಾಯಿಯೂ ಬಂದಿದ್ದರೆ ಸಲೀಸಾಗಿ ಮಾತನಾಡಬಹುದಾಗಿತ್ತು ಎನಿಸಿತ್ತು.

ಮಾಲತಿಯೊಡನೆ ಸ್ವಲ್ಪ ಮಾತನಾಡಬೇಕು ಎಂದಾಗ ಅವಳಿಗೆ ಸ್ವಲ್ಪ ಗಾಬರಿಯೇ ಆಯಿತು. ಮುಂದಿನ ರೂಮಿನಲ್ಲಿ ಇಬ್ಬರೂ ಮಾತಿಗೆಂದು ಕುಳಿತಾಗ ಈಗ ರಾಗಿಣಿ ಇದ್ದಿದ್ದರೆ ಚೆನ್ನಾಗಿತ್ತು ಎನಿಸದೇ ಇರಲಿಲ್ಲ. ಹೊರಗೆ ಮೋಹನ ಮಾಧವನ ಜತೆ ಮಾತನಾಡುತ್ತಿದ್ದ. ಭವಾನಮ್ಮನ ಚಡಪಡಿಕೆ ಯಾರಿಗೂ ಅರ್ಥವಾಗಲಿಲ್ಲ.

ಮನೋಹರ ಹಾಗೂ ಅವನ ಸ್ನೇಹಿತ ಹೋಗುವುದನ್ನೇ ಕಾದಿದ್ದ ಭವಾನಮ್ಮ ಮಗಳನ್ನು ಆತಂಕದಿಂದ ಕೇಳಿದಳು.

"ಅಷ್ಟೊತ್ತು ಏನು ಮಾತನಾಡಿದರೆ?"

"ಏನಮ್ಮ ನೀನು.... ಅದನ್ನೆಲ್ಲ ಕೇಳ್ತೀಯಲ್ಲ" ಮೋಹನ ನುಡಿದ.

"ಏನೀಗ ಕೇಳಿದರೆ! ಅವರಿಬ್ಬರಿಗೂ ಇನ್ನು ಮದುವೆಯಾಗಿಲ್ಲ... ಏಕಾಂತವಾಗಿ ಮಾತನಾಡೊಕೆ ಏನಿರುತ್ತೆ!"

"ಲವ್ ಮಾಡಿ ಮದುವೆಯಾಗ್ತಾರಲ್ಲ. ಅವರೆಲ್ಲ ಮದುವೆಗೆ ಮುಂಚೆ ಏನು ಮಾತನಾಡಿದ್ವಿ ಅಂತ ಯಾರಿಗಾದ್ರೂ ಹೇಳ್ತಾರಾ! ಸ್ವಲ್ಪ ಸೆನ್ಸಿಬಲ್ ಆಗಿರು"

"ಹೌದು ಕಣೋ, ನಾನು ಸೆನ್ಸಿಬಲ್ ಅಲ್ಲ. ಇದು ಲವ್ ಮ್ಯಾರೇಜ್ ಏನಲ್ಲ. ಒಪ್ಪಿದೀನಿ ಅಂತ ಹೇಳೊಕ್ಕೆ ಮುಂಚೆ ಏನಿರುತ್ತೆ? ಮಾತು, ಅದ್ಸರಿ ಅವರಪ್ಪ ಅಮ್ಮ ಏಕೆ ಬರಲಿಲ್ಲವಂತೆ?"

"ನಿಮ್ಮಪ್ಪ ನಿಮ್ಮಮ್ಮ ಏಕೆ ಬಂದಿಲ್ಲ ಅಂತ ನಾನು ಕೇಳಲಿಲ್ಲ"

"ಅವನ ಸ್ನೇಹಿತ ಹೇಳಿದ, ಇಬ್ಬರೂ ಮಗಳ ಮನೆಗೆ ಹೋಗಿದ್ದಾರಂತೆ. ಮಗಳಿಗೆ ಹೆರಿಗೆ ಆಗಿದೆಯಂತೆ" ಮೋಹನ ನುಡಿದ.

"ಹೌದೇನೋ, ಮನೋಹರ ನನಗೆ ಹೇಳಲಿಲ್ಲ."

"ಹೋಗಲಿ ಬಿಡು. ಒಪ್ಪಿದ್ದೀನಿ ಅಂತ ಹೇಳಿದ್ನಾ?"

"ನಿನಗೊಳ್ಳೆ ಆತುರವಲ್ಲಮ್ಮ..... ನನಗೆ ಒಪ್ಪಿಗೆಯಾಗಿದೆ. ನಿಮಗೆ ಒಪ್ಪಿಗೇನಾ ಅಂತ ಕೇಳಿದ. ನಾನು ಯೋಚಿಸ್ಬಿಟ್ಟು ಹೇಳ್ತೀನಿ ಅಂದೆ"

"ಏನಿದೆಯೇ ಯೋಚಿಸಿ ಹೇಳಕ್ಕೆ? ಹೂಂ ಒಪ್ಪಿದೀನಿ ಅಂತ ಹೇಳಿ ಬಿಡಬೇಕಾಗಿತ್ತು" ಮಗಳನ್ನು ಗದರಿದಳು.

"ಅವನ ಹಾಗೇ ನಾನೂ ಒಂದೆರಡು ದಿನ ಸತಾಯಿಸೋಣ ಅಂತ

ಅನ್ನಿಸ್ತು......ಏನಂತಿಯೋ ಮೋನ!"

"ನಿನಗೆಂತಹ ಪೈಪೋಟಿ! ಅದಕ್ಕೆ ಇವನ ಬೆಂಬಲ ಬೇರೆ!"

ಇಬ್ಬರೂ ನಕ್ಕಾಗ ಭವಾನಮ್ಮ ಪೆಚ್ಚಾದಳು. "ಇಬ್ಬರೂ ಸೇರಿಕೊಂಡು ನನ್ನನ್ನು ಪೆದ್ದಿಯನ್ನಾಗಿ ಮಾಡಕ್ಕೆ ನೋಡ್ತಿದೀರಾ? ಇಬ್ಬರಿಗೂ ಜವಾಬ್ದಾರಿನೇ ಇಲ್ಲ" ಎಂದು ಹಗುರವಾಗಿ ಬೈದು ಹೊರಟು ಹೋದಳು. ಅವಳ ಹಿಂದೆ ಮತ್ತೆ ಇಬ್ಬರೂ ಕಿಸಕ್ಕನೆ ನಕ್ಕರು.

ಸಾಯಂಕಾಲವಾದರೂ ತಂದೆ ಮನೆಗೆ ಬರದಿದ್ದಾಗ ಭವಾನಮ್ಮ ಗಾಭರಿಯಾದಳು.

"ಸ್ನೇಹಿತನ ಮನೆಗೆ ಊಟಕ್ಕೆ ಅಂತ ಬೆಳಿಗ್ಗೇನೇ ಹೋದವರು ಕತ್ತಲೆಯಾದರೂ ಬರಲಿಲ್ಲವಲ್ಲ" ಎಂದು ನಾಲ್ಕೈದು ಸಲವಾದರೂ ಪರಿತಪಿಸಿದಳು.

ರಾತ್ರಿ ಊಟದ ಸಮಯಕ್ಕೆ ಅವರು ಬಂದರು.

"ನಿಮಗಂತೂ ಮನೇ ಕಡೆ ಗಮನವೇ ಇಲ್ಲ. ಅವತ್ತು ಮಾಲತೀನ ನೋಡಕ್ಕೆ ಬಂದಿದ್ದನಲ್ಲ ಆ ಹುಡುಗ ಬಂದಿದ್ದ. ನೀವು ಬರಲೇ ಇಲ್ಲ"

"ಮೋಹನ ಇದ್ದನೋ ಇಲ್ಲವೋ?"

"ಅವನಿದ್ದರೆ ನೀವಿದ್ದ ಹಾಗಾಯ್ತೆ?" ಎಲ್ಲಾ ವರದಿ ಒಪ್ಪಿಸಿದಳು.

"ಒಪ್ಪಿದಾನೆ ಅಂತ ಕಾಣೆಸುತ್ತೆ. ಅದಕ್ಕೇ ಮತ್ತೆ ಬಂದಿದ್ದಾನೆ. ಒಳ್ಳೆದಾಯ್ತುಬಿಡು. ನಮ್ಮ ಮಾಲತಿ ಪುಣ್ಯ ಮಾಡಿದ್ದಳು"

"ಇನ್ನು ಮೇಲೆ ನೀವು ಮನೆ ಬಿಟ್ಟು ಸ್ನೇಹಿತ, ಅವನು ಇವನು ಅಂತ ಎಲ್ಲೆಲ್ಲೋ ಹೋಗಬೇಡಿ. ಮದುವೆ ಕಲಾಪ ಮುಗಿಯುವರೆಗೂ ನೀವು ಮನೆಯಲ್ಲೇ ಇರಬೇಕು"

"ಹಾಗಾದ್ರೆ ಎಲ್ಲಾ ಸೆಟ್ಲ್ ಆಯ್ತು ಅನ್ನು"

"ಮಾಲಾ ಬಾ..... ಇಲ್ಲಿ" ತಂದೆ ಕರೆದಾಗ ಅವಳು ಬಂದು ಎದುರಿಗೆ ನಿಂತಳು.

"ಏನಮ್ಮ ನಿನಗೆ ಒಪ್ಪಿಗೇನಾ! ಈಗಲೇ ಹೇಳಿಬಿಡು"

ಮಾಲತಿ 'ಹೂಂ' ಎನ್ನುವಷ್ಟರಲ್ಲಿ ಭವಾನಮ್ಮ ಬಾಯಿ ಹಾಕಿದ್ದಳು.

"ಅವಳನ್ನು ಕೇಳೋದೇನು? ಒಪ್ಪದೇ ಇರುವ ಸಾಧ್ಯತೆಯೇ ಇಲ್ಲ"

"ಹಾಗೆನ್ನಬೇಡ, ಅವಳ ಒಪ್ಪಿಗೆಯೂ ಮುಖ್ಯ. ಏನು ನಿನ್ನ ಕಾಲ ಅಂದ್ಕೊಂಡ್ಯಾ.....? ನನ್ನಂತಹ ಬಕರಾಸಿಕ್ಕಿದ ಕೂಡಲೆ, ಹಿಂದೆ ಮುಂದೆ

ನೋಡದೆ ತಗಲಿ ಹಾಕೊಕ್ಕೆ?" ತುಂಟ ನಗೆ ನಕ್ಕು ಪ್ರಶ್ನಿಸಿದ್ದರು.

"ಅದರಿಂದ ನಿಮಗೆ ಅನ್ಯಾಯವಾದುದಾರೂ ಏನು?"

"ಏನಿಲ್ಲ..... ಈಗ ನಿನಗೆ ಏನೂ ಅನ್ನಿಸೋಲ್ವೆ......? ನಿಮ್ಮಪ್ಪ ನಿನ್ನನ್ನ ಒಂದು ಮಾತು ಕೇಳಲಿಲ್ಲ ಅಂತ......?"

"ಆ ಮಾತೆಲ್ಲಾ ಯಾಕೆ ಈಗ? ಮಕ್ಕಳೆದುರಿಗೆ!"

"ಅವರೇನು ಹೊರಗಿನವರೇ ನಮ್ಮ ಮಕ್ಕಳೇ ತಾನೇ?"

ಭವಾನಮ್ಮ ನಾಚಿದಾಗ, ಮೋಹನ ಹಾಸ್ಯ ಮಾಡದ.

"ಮಾಲತಿಗೆ ಮದುವೆ. ನಿನಗಲ್ಲ. ನೀನೇಕೆ ಇಷ್ಟು ನಾಚ್ತೀಯಾ?"

"ಅವಳು ಹಾಗೇನೇ. ನಿನ್ನ ಮದುವೇಲೂ ನಿನಗಿಂತ ಹೆಚ್ಚಾಗಿ ಅವಳೇ ನಾಚ್ತಾಳೆ ನೋಡ್ತಿರು" ಎಲ್ಲರೂ ಮತ್ತೊಮ್ಮೆ ನಕ್ಕಾಗ ಭವಾನಮ್ಮ ಕೆಂಪಾದಳು.

ಮಾರನೇ ದಿನವೇ ಮಾಲತಿ ಮಧುರಳನ್ನು ಭೇಟಿಯಾಗಿ, ಮನೋಹರ ತನ್ನೊಡನೆ ಆಡಿದ್ದ ಮಾತುಗಳನ್ನೆಲ್ಲ ಹೇಳಿ, ಮಧುರಳ ಭಾವನೆಗಳನ್ನು ಕಲಕಿದಳು. ನಾವಿಬ್ಬರೂ ಒಂದೇ ವಯಸ್ಸಿನವರು. ನನ್ನ ಮದುವೆ ಯಾವಾಗಲೋ ಎಂದು ಕೊಂಡಾಗ, ತಾನು ಆ ಬಗ್ಗೆ ಯೋಚಿಸದಿರುವುದೇ ಒಳ್ಳೆಯದು ಎಂದು ಕೊಂಡಳು.

ಎಂದೂ, ತನ್ನ ತಂದೆ ತಾಯಿ, ತನ್ನ ಮದುವೆ ಬಗ್ಗೆ ಮಾತನಾಡಿದ್ದು ಅವಳಿಗೆ ನೆನಪಿಲ್ಲ. ಕಾಲೇಜಿನ ಓದು ಮುಗಿಸಿ, ಮನೆಯಲ್ಲಿ ಕಾಲ ಕಳೆಯುತ್ತಿದ್ದರೂ, ತನ್ನ ತಂದೆ ತಾಯಿ ತನ್ನ ಮದುವೆ ಬಗ್ಗೆ ಯಾಕೆ ಚಿಂತಿಸಿಲ್ಲ ಎಂದು ಒಮ್ಮೊಮ್ಮೆ ಅವಳಿಗೆ ಅನ್ನಿಸಿದ್ದುಂಟು. ಆದರೆ ಎಂದೂ ಆ ಆಲೋಚನೆಯನ್ನು ತನ್ನ ಸ್ನೇಹಿತೆಯೊಡನೆ ಸಹ ಹೇಳಿಕೊಂಡಿರಲಿಲ್ಲ.

ತಂದೆ ತಾಯಿಯ ಗಂಭೀರವಾದ ಮುಖ ನೋಡಿದಾಗ, ಏನನ್ನೂ ಕೇಳುವುದು ಬೇಡ ಎನಿಸುತ್ತಿತ್ತು. ಎಂದೂ ತನಗೆ ಅದು ಬೇಕು. ಇದು ಬೇಕು ಎಂದು ಅವಳಾಗಲೀ, ರಾಗಿಣಿಯಾಗಲೀ ಹಠ ಮಾಡುತ್ತಿರಲಿಲ್ಲ. ಏಕೋ ಏನೋ ಮನೆಯ ವಾತಾವರಣದಿಂದ ಅವಳು ದಿನ ದಿನಕ್ಕೂ ಹೆಚ್ಚು ಹೆಚ್ಚು ಗಂಭೀರವಾದಳು. ಅವಳಿಗಿಂತ ಹತ್ತು ವರ್ಷ ಚಿಕ್ಕವಳಾದ ರಾಗಿಣಿ ಎಷ್ಟೋವಾಸಿ. ಸ್ಕೂಲು, ಓದು, ಸ್ನೇಹಿತೆಯರು ಎಂದು ಹೆಚ್ಚಿಗೆ ಹೊರಗೆ ಕಾಲ ಹಾಕುತ್ತಿದ್ದಳು. ಆದರೆ ಇವಳಿಗೆ? ಮಾಲತಿಯ ಹೊರತು ಇನ್ನ್ಯಾರೂ ಸ್ನೇಹಿತೆಯರಿರಲಿಲ್ಲ. ಮಾಲತಿ ಆಡುತ್ತಿದ್ದ ಮಾತುಗಳನ್ನೆಲ್ಲ ಆಸಕ್ತಿಯಿಂದ ಕೇಳಿ ಕೊಳ್ಳುತ್ತಿದ್ದಳು. ತಾನಾಗಿಯೇ ಕೆದಕಿ ಬೆದಕಿ ಏನನ್ನೂ

ಕೇಳುತ್ತಿರಲಿಲ್ಲ. ಸ್ನೇಹಿತೆಗೆ ಸಲಹೆ ಬೇಕಾದಾಗ, ತನಗೆ ತಿಳಿದ ಸಲಹೆ ನೀಡುತ್ತಿದ್ದಳು.

ಇದ್ದಕ್ಕಿದ್ದಂತೆ ಮಾಲತಿಯ ಮದುವೆ ಮಾತು ಎದ್ದಾಗ, ಮಧುರ ಇನ್ನೂ ಗಂಭೀರವಾದಳು. ಮಾಲತಿಗೆ ಮದುವೆಯಾಗಿ ಹೊರಟು ಹೋದರೆ, ತನಗಿನ್ಯಾರೂ ಆಪ್ತರಿಲ್ಲ ಎಂದು ಯೋಚಿಸುವುದಕ್ಕೇ ಬೇಜಾರಾಯಿತು. ಆದರೆ ಕ್ರಮೇಣ ಅದಕ್ಕೂ ತಾನು ಹೊಂದಿಕೊಳ್ಳ ಬೇಕಾಗುತ್ತದೆ ಎನ್ನುವುದನ್ನು ಬಲ್ಲಳು.

"ಏನೇ ಇದ್ದಕ್ಕಿದ್ದಂತೆ ಮೌನವಾಗಿ ಬಿಟ್ಟೆಯಲ್ಲೆ?"

"ಏನಿಲ್ಲ. ನಿನ್ನ ಮಾತುಗಳನ್ನೇ ಕೇಳಿಸಿಕೊಳ್ಳುತ್ತಿದ್ದೆ"

"ನೋಡಿದ್ರೆ ಒಳ್ಳೆಯವರಂತೆ ಕಾಣ್ತಾರೆ. ನಾನು ಹ್ಯಾಪಿಯಾಗಿರ್ತೀನಿ ಅಂತ ಅನ್ನಿಸುತ್ತೆ. ಅಲ್ವೇನೆ!"

"ನನಗೇನು ಗೊತ್ತು? ನಾನು ಅವರನ್ನು ನೋಡಿಲ್ಲ. ಮಾತನಾಡಿಸಿಲ್ಲ."

"ನೆನ್ನೆ ದಿನ ನೀನು ತಕ್ಷಣ ಹೊರಡದೇ ಇದ್ದಿದ್ದರೆ, ನಿನಗೆ ಆ ಅವಕಾಶವೂ ಸಿಗುತ್ತಿತ್ತು"

"ಪರವಾಗಿಲ್ಲ ಬಿಡೇ..... ಅದಕ್ಕೆಲ್ಲ ಇನ್ನೂ ಟೈಮಿದೆ"

"ಮತ್ತೆ ಅವರು ನಮ್ಮ ಮನೆಗೆ ಬಂದಾಗ ನಾನು, ಮೋಹನನ ಕೈಲಿ ಹೇಳಿ ಕಳಿಸ್ತೀನಿ. ತಕ್ಷಣ ಬರಬೇಕು"

"ನೋಡೋಣ....... ಆದರೆ ಬರ್ತೀನಿ......"

"ಏನೇ....... ನಿನ್ನ ಸ್ನೇಹಿತೆಗೆ ಮದುವೆ ಆಗ್ತಿದೆ ಅಂತ ಅಸೂಯೇನಾ!"

ಛೇ! ಎಂತಹ ಮಾತನಾಡ್ತಿಯಾ ಮಾಲತಿ? ನಿನಗೆ ಮದುವೆ ಆದರೆ ನನಗೇಕೆ ಅಸೂಯೆ! ಇಷ್ಟೇನಾ ನೀನು ನನ್ನನ್ನು ಅರ್ಥ ಮಾಡಿಕೊಂಡಿರುವುದು?"

"ಸುಮ್ಮನೇ ತಮಾಷೆಗೆ ಹೇಳಿದೆ..... ನನ್ನ ಮದುವೆ ಆದ ಕೂಡಲೇ ನಾನು ನಿನ್ನ ಮದುವೆಗೆ ಪ್ರಯತ್ನಪಡ್ತೀನಿ"

ಮಧುರ ನಕ್ಕಳು. 'ಹೇಗೆ' ಎಂದು ಕೇಳಲಿಲ್ಲ.

"ಯಾಕಮ್ಮ ನಗ್ತೀಯಾ! ಸ್ನೇಹಿತೇನ ಮರೆತುಬಿಡ್ತೀನಿ ಅಂದ್ಕೊಂಡ್ಯಾ!"

"ನಾನೇನೂ ಅನ್ನಲಿಲ್ಲ. ನೀನೇ ಎಲ್ಲಾ ಆಡ್ತಿದೀಯಾ......"

ಸಧ್ಯದಲ್ಲೇ ಮದುವೆ ಲಗ್ನ ಸಿಕ್ಕಿದರೆ, ಬೇಗ ಮದುವೆಯಾಗಬೇಕಾಗುತ್ತೆ. ಬೇಕಾದಷ್ಟು ಷಾಪಿಂಗ್ ಇರುತ್ತೆ. ಸ್ನೇಹಿತೆಯರಿಗೆ ಆಹ್ವಾನ ಪತ್ರಿಕೆ ಕೊಡಬೇಕು. ಎಲ್ಲಾದಕ್ಕೂ ನೀನೆ ನನಗೆ ಜತೆ. ಆಮೇಲೆ ಆಗೊಲ್ಲ ಅನ್ನಬೇಡ. ಈಗಲೇ

ಹೇಳ್ತಿದ್ದೀನಿ. ನಾನು ಬರಲೇನೇ..... ಹೊತ್ತಾಯ್ತು ಅಂತ ಅಮ್ಮ ಮೋಹನನ್ನ ಕಳಿಸ್ತಾಳೆ. ಆಮೇಲೆ ಅವನು ನನ್ನನ್ನು ಬೈಯ್ತಾನೆ. ನಾಳೆ ನಾಡಿದ್ದರಲ್ಲಿ ಮತ್ತೆ ಬರ್ತೀನಿ. ಬೈ ಬೈ ಎಂದು ಮಾಲತಿ ಹೇಳಿ ಹೊರಟಾಗ, ಮಧುರ ಅವಳನ್ನೇ ನೋಡಿದಳು.

ಉತ್ಸಾಹ, ಉಲ್ಲಾಸದಿಂದ ಕೂಡಿದ ಮಾಲತಿಯನ್ನು ಕಂಡು, ತನಗೆ ಮದುವೆ ಗೊತ್ತಾದರೆ ತನಗೂ ಈ ಅನುಭವಗಳಾಗಬಹುದೇ..... ಎಂದುಕೊಂಡು ತಕ್ಷಣವೇ ತಲೆ ಕೊಡವಿಕೊಂಡಳು.

ನನಗೇನಾಗಿದೆ! ಮಾಲತಿಯ ಮದುವೆ ಗೊತ್ತಾಗುವ ಹಾಗಿರುವಾಗಲೇ ನನಗೆ ನನ್ನ ಮದುವೆ ಚಿಂತೆ, ಆಗ ಈಗ ಕಾಡುತ್ತಿದೆಯಲ್ಲ. ವಯೋಧರ್ಮವೇನೋ ಎಂದು ಕೊಂಡಳು.

ಅಂತೂ ಮಾಲತಿಯ ಮದುವೆ ನಿಶ್ಚಯವಾಯಿತು. ಮನೋಹರನ ತಂದೆ ತಾಯಿ ಬಂದು ಮಾತುಕತೆ ಮುಗಿಸಿದ್ದರು. ಲಗ್ನಪತ್ರಿಕೆಯ ದಿನವನ್ನು ಗೊತ್ತು ಮಾಡಿದರು.

ನನ್ನ ಮಗಳು ಬಾಣಂತಿ. ಒಂದೆರಡು ತಿಂಗಳು ಕಳೆಯಲಿ ಅಂತ ನಮ್ಮ ಆಸೆ. ಆದರೆ ಮನೋಹರ ಏನನ್ನುತಾನೋ ಎಂಬ ಅನುಮಾನವನ್ನು ವ್ಯಕ್ತಪಡಿಸಿದ್ದರು.

ಆದರೆ ಮನೋಹರ ಮಾಲತಿಯೊಡನೆ ನುಡಿದಿದ್ದ.

"ನನ್ನ ತಂಗಿ ಬಾಣಂತನಕ್ಕೆ ಇಲ್ಲಿಗೇ ಬರಬೇಕಾಗಿತ್ತು. ಲಗ್ನಪತ್ರಿಕೆಗೆ ಬರೋಕ್ಕೆ ಆಗುತ್ತೊ ಇಲ್ಲವೋ, ಒಂದು ತಿಂಗಳಾದರೂ ಕಳೆಯಲಿ, ಕಾರಿನಲ್ಲಿ ಕರೆದುಕೊಂಡು ಬರಬಹುದು. ಅವಳ ಅತ್ತೆ ಒಂದು ತರಹ, ಸೊಸೆಗೆ, ಮೊಮ್ಮಗನಿಗೆ ಏನಾಗಿಬಿಡುತ್ತೋ ಅಂತ ಹೆದರಿಕೆಯಂತೆ. ನನಗೂ ಹೆಚ್ಚಿಗೆ ರಜವಿಲ್ಲ. ಆದರೆ ಈಗ ಹೋದರೆ, ಇನ್ನೊಂದು ತಿಂಗಳ ನಂತರವೇ ಮತ್ತೆ ಬರಕ್ಕೆ ಆಗುವುದು. ಈಗಲೇ ಈ ವಾರದಲ್ಲೇ ಮದುವೆ ಮಾಡಿಕೊಂಡು ಹೋದರೆ ಹೇಗಿರುತ್ತೆ ಅಂತ ಒಂದೊಂದು ಸಲ ಯೋಚಿಸ್ತೀನಿ"

ಮಾಲತಿ ಸುಮ್ಮನೇ ನಕ್ಕಿದ್ದಳು.

"ಸುಮ್ಮನೇ ನಕ್ಕರೇ......? ನನ್ನಷ್ಟೇ ಯೋಚಿಸಬೇಕು. ಈ ಮೊದಲು ನಮ್ಮ ಪರಿಚಯವೇ ಇರಲಿಲ್ಲ. ನನ್ನನ್ನು ಬಿಟ್ಟು ಇರೊಕ್ಕೆ ಆಗುತ್ತೆ ಅಂತ ತಿಳಿದಿದೀರಾ! ನನ್ನ ನೆನಪು ಸತಾಯಿಸುತ್ತೆ ನಿಮ್ಮನ್ನ..... ನೋಡ್ತಿರಿ"

"ಏನೋ ಆ ಅನುಭವ ನನಗಿಲ್ಲ" ಮಾಲತಿ ನಾಚಿ ನುಡಿದಳು.

"ನನಗೂ ಇಲ್ಲ. ಆದರೂ ಹಾಗೆ ಅನ್ನಿಸುತ್ತೆ. ಹೋಗಲಿ, ದಿನಕ್ಕೊಂದು ಕಾಗದವನ್ನಾದರೂ ಬರೆಯಬೇಕು. ನಾನೂ ಬರೀತೀನಿ."

"ಹೂಂ," ಎಂದಿದ್ದಳು ನಾಚುತ್ತಾ.

ಮತ್ತೆ ಮತ್ತೆ ಇದೇ ತರಹದ ಮಾತುಗಳು. ಆದರೂ ಬೇಜಾರಾಗುತ್ತಿರಲಿಲ್ಲ. ಸಮಯ ಕಳೆದುದೇ ಗೊತ್ತಾಗುತ್ತಿರಲಿಲ್ಲ. ಅವನು ಹೊರಟು ನಿಂತಾಗ, ಅವನು ಇನ್ನು ಸ್ವಲ್ಪ ಹೊತ್ತು ತನ್ನ ಬಳಿ ಇರಲಿ ಎನ್ನುವ ಬಯಕೆ ಯುಂಟಾಗುತ್ತಿತ್ತು.

ಮಾಲತಿ ಆ ಅನುಭವಗಳನ್ನೆಲ್ಲಾ ಮಧುರಳೊಂದಿಗೆ ಹಂಚಿಕೊಳ್ಳುತ್ತಿದ್ದಳು.

"ನಾನು ಒಂದೂ ಬಿಡದೇ ನಿನಗೆ ಇದನ್ನೆಲ್ಲ ಹೇಳಿದ್ದೀನಿ. ನೀನೂ ಅಷ್ಟೇ..... ನಿನ್ನ ಈ ತರಹದ ಅನುಭವಗಳನ್ನು ಮರೆಯದೇ ನನಗೆ ಬರೆದು ತಿಳಿಸಬೇಕು"

"ಸದ್ಯಕ್ಕಂತೂ ಅದು ಸಾಧ್ಯವಿಲ್ಲ. ಮುಂದೆ ನೋಡೋಣ ಆಗ ನಿನಗೆ ನನ್ನ ಅನುಭವಗಳನ್ನು ಕೇಳಕ್ಕೆ ಸಮಯವಿರುತ್ತೋ ಇಲ್ಲವೋ?"

"ಯಾಕೆ ಇರಲ್ಲ? ನಿನ್ನ ಮಾತು ಕೇಳಿದರೆ ನಾನು ಆ ಕಡೆ ನನ್ನ ಗಂಡನ ಮನೆಗೆ ಹೋದಕೂಡಲೇ ನನ್ನನ್ನು ಮರೆತುಬಿಡ್ತೀಯೇನೋ, ಅನಿಸುತ್ತೆ. ಯಾವ ಊರಿಗೆ ವರ್ಗವಾದರೂ, ನಾನು ಆ ಊರಿನ ವಿಳಾಸ ತಿಳಿಸ್ತೀನಿ. ನೀನು ಖಂಡಿತಾ ಕಾಗದವನ್ನು ಬರೆಯಬೇಕು. ನನ್ನನ್ನು ಮರೆಯಬಾರದು."

'ಹುಂ' ಎಂದಳು ಮಧುರ, ಮಾಲತಿಯನ್ನು ಮೆಚ್ಚಿಸಲು.

ಲಗ್ನಪತ್ರಿಕೆ ಸಮಾರಂಭ ಕೂಡಾ, ವಿಶೇಷವಾಗಿಯೇ ನಡೆಯಿತು. ಹತ್ತಿರದ ಮುಖ್ಯವಾದ ನೆಂಟರಿಷ್ಟರು, ಇಬ್ಬರ ಮನೆಕಡೆಯಿಂದಲೂ ಸಾಕಷ್ಟು ಜನಸೇರಿದ್ದರು. ಮಧುರನ ತಂದೆ ತಾಯಿಗಳನ್ನು ಸಹ ಕರೆದಿದ್ದರು.

ಆ ಸಮಯದಲ್ಲೇ ಮನೋಹರ ಮಧುರಳನ್ನು ಮೊಟ್ಟಮೊದಲ ಬಾರಿಗೆ ನೋಡಿದ್ದು. ಮಾಲತಿ ತನ್ನ ಸ್ನೇಹಿತೆ ಎಂದು ಪರಿಚಯಿಸಿಕೊಟ್ಟಾಗ ಅವನ ಕಣ್ಣುಗಳು ಅರಳಿದವು. "ಲವ್ಲೀ" ಎಂದುಕೊಂಡ ತನ್ನಲ್ಲೇ.

ಮಾಲತಿಯ ಜತೆ ಜತೆಯಲ್ಲಿಯೇ ಇರುತ್ತಿದ್ದವಳನ್ನು ಮನೋಹರನ ಸ್ನೇಹಿತ ಕೇಶವ ನೋಡಿದ. ಅವನ ಚಿತ್ತ ಚಂಚಲವಾದಂತಾಯಿತು. ಅವಳನ್ನು ಬಿಟ್ಟು, ಅವನ ಕಣ್ಣುಗಳು ಅತ್ತಿತ್ತ ಚಲಿಸಲಿಲ್ಲ. ಎಂದೂ ಹುಡುಗಿಯರನ್ನೇ ಕಾಣದವನಂತೆ ನಿರ್ಲಜ್ಜೆಯಿಂದ ಅವಳನ್ನೇ ನೋಡುತ್ತಿದ್ದವನನ್ನು ಮೋಹನ ಗಮನಿಸಿದ. ಅವನಿಗೆ ಏನನ್ನೋ ಕಳೆದುಕೊಂಡ ಅನುಭವವಾಯಿತು. ತನ್ನ

ವಸ್ತುವನ್ನು ಯಾರೋ ತನ್ನಿಂದ ಕಸಿದುಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆಂದೆನಿಸಿ, ಯಾವ ಉತ್ಸಾಹವೂ ಇಲ್ಲದಾಯಿತು.

ಆ ಕಮಂಗಿ ಏಕೆ ಬಂದನೋ! ಎಂತಹ ಸ್ನೇಹಿತ ಇವನಿಗೆ! ಎಂದು ಬೈದುಕೊಳ್ಳುವಂತಾಯಿತು. ಒಂದುಗಳಿಗೆ ಮಧುರಾಳ ಮೇಲೂ ಸಿಟ್ಟು ಬಂತು. ಇವಳೇಕೆ ಇಷ್ಟು ಚೆನ್ನಾಗಿದ್ದಾಳೆ! ಇವಳು ಬರದಿದ್ದರೂ ಆಗುತ್ತಿತ್ತು ಎಂದೂ ಅನ್ನಿಸಿತ್ತು. ತಾನು ಅವಳನ್ನು ಕೇಶವನ ಕಣ್ಣುಗಳಿಂದ ಹೇಗೆ ತಪ್ಪಿಸಬಲ್ಲೆ? ಅವನೆದುರಿಗೆ ಕಾಣುವಂತೆ ನಿಲ್ಲಬೇಡ ಎಂದು ಹೇಗೆ ಹೇಳಲಿ ಎಂದು ಪರಿತಪಿಸಿದ. ಅವನ ಒದ್ದಾಟ ಯಾರಿಗೂ ತಿಳಿಯಲಿಲ್ಲ.

ಇದ್ದಕ್ಕಿದ್ದಂತೆ ಏನೋ ಮಂಕುತನ ಆವರಿಸಿದಂತೆ ಆದಾಗ, ಅವನಿಗೆ ಏನೋ ಒಂದು ವಿಷಯ ಅರ್ಥವಾಗದವನಂತೆ ತೊಳಲಾಡಿದ. ಬೇಗ ಈ ಕಾರ್ಯಕ್ರಮ ಮುಗಿಯಬಾರದೇ..... ಅವರೆಲ್ಲ ಹೋಗಬಾರದೇ ಎನಿಸತೊಡಗಿತು. ಅದೇಕೆ ಎಂದು ತಿಳಿಯಲಿಲ್ಲ. ಅಥವ ತಿಳಿಯದವನಂತೆ ನಟಿಸಿದ.

ಮುಂದಿನ ತಿಂಗಳಿನ ಒಂದು ಶುಭದಿವಸವನ್ನು ಗೊತ್ತು ಮಾಡಿ ಲಗ್ನಪತ್ರಿಕೆ ಬರೆಸಿದರು. ಸಿಹಿ ಊಟದ ನಂತರ, ಅವರೆಲ್ಲ ತೆರಳಿದರು. ಮೋಹನನಿಗೆ ಹಾಯೆನಿಸಿತ್ತು. ಮಾಲತಿ ಮಾತ್ರ ಮಂಕಾದಳು.

ಹೊರಡುವ ಮೊದಲು ಮನೋಹರನ ಕಣ್ಣುಗಳು ಪ್ರೀತಿಯನ್ನು ಸೂಸಿದ್ದನ್ನು ಮಾಲತಿ ಗಮನಿಸಿದ್ದಳು. ಆ ಕಣ್ಣಿನ ಪ್ರೀತಿಯ ಸೆಳೆತಕ್ಕೆ ಒಳಗಾಗಿದ್ದಳು. ಅವನ ಹಿಂದೆಯೇ ತನ್ನ ಚೇತನವೆಲ್ಲಾ ಹೋದಂತೆನಿಸಿ ಮೌನಿಯಾದಳು.

ಮಧುರ ತನ್ನ ತಂದೆ ತಾಯಿಯರ ಜತೆಯಲ್ಲೇ ಹೊರಟುಹೋಗಿದ್ದಳು. ರಾಗಿಣಿ, ಪರೀಕ್ಷೆ ಇದೆಯೆಂದು ಬಂದಿರಲಿಲ್ಲ. ಇದ್ದಕ್ಕಿದ್ದಂತೆ ತಂಗಿ ಮೌನವ್ರತ ಮಾಡುತ್ತಿದ್ದಾಳೆಂದು ಅನಿಸಿ ಮೋಹನ ಕೀಟಲೆ ಮಾಡಿದ.

"ಏನೇ ಇವತ್ತೇ ವಿರಹಿ ತರಹ ಕೂತು ಬಿಟ್ಟೆಯಲ್ಲಾ. ಇನ್ನೂ ಒಂದು ತಿಂಗಳು ಹೇಗೆ ಕಳಿತೀಯಾ.... ಹಾಗಾದ್ರೆ?"

"ಏನೂ ಇಲ್ಲ. ಸ್ವಲ್ಪ ಸುಸ್ತಾಗಿದೆ. ಮಲಗಿರ್ತೀನಿ ಒಂದು ಗಳಿಗೆ" ಅವಳು ರೂಮಿನಕಡೆ ಹೊರಟಾಗ ಅವನೂ ತನ್ನ ರೂಮಿಗೆ ನಡೆದ.

ಕೇಶವ, ಮಧುರ ಎಲ್ಲರೂ ಅವರವರ ಪಾಡಿಗೆ ಹೊರಟುಹೋದುದರಿಂದ ಅವನಿಗೆ ಹಾಯೆನಿಸಿತ್ತು.

ಮತ್ತೆ ಮದುವೇಲೂ ಈ ಭೂತ ಹೀಗೇ ಕಾಡ್ತಾನೇನೋ, ಅವನಿಗೆ ಏನಾದರೂ ಆಗಿ ಮದುವೆಗೆ ಬರದಂತೆ ಆದರೆ ಎನಿಸಿದಾಗ, ತನ್ನ ಕೆಟ್ಟ

ಆಲೋಚನೆಗೆ ತನಗೇ ಹೀನಾಯವೆನಿಸಿತು. ಇದಕ್ಕೆಲ್ಲ ಕಾರಣ ಈ ಮಧುರ ಎನಿಸಿದಾಗ ಅವಳ ರೂಪ ಅವನ ಕಣ್ಣೆದುರು ಬಂದು ನಿಂತಿತು.

ಈ ದಿನ ತನಗೇನಾಗಿದೆ! ತಾನೇಕೆ ಅವಳ ಬಗ್ಗೆ ತಲೆ ಕೆಡಿಸಿಕೊಳ್ಳುತ್ತಿದ್ದೇನೆ? ಅವಳೇನೂ ತನಗೆ ಹೊಸಬಳಲ್ಲ. ಎಷ್ಟೋ ವರ್ಷಗಳ ಪರಿಚಯ. ಆದರೆ ಈ ದಿನ ಇದ್ದಕ್ಕಿದ್ದಂತೆ ಅವಳ ಬಗ್ಗೆ ತನಗೆ ಆಸಕ್ತಿ ಏಕೆ ಹೆಚ್ಚಾಯಿತು? ಕೇಶವನ ಕಣ್ಣುಗಳು ಇಂಗಿಹೋಗಲಿ ಎನ್ನುವಷ್ಟು ಕೋಪ ಏಕೆ ಬಂತು? ಅವಳೇನು ನಮ್ಮ ಮನೆಯವಳೇ...... ಹೌದು, ಅವಳು ನಮ್ಮ ಮನೆಯವಳೇ..... ನನ್ನವಳೇ ಎಂದು ಅನಿಸಿದ ಕೂಡಲೇ ಮಲಗಿದ್ದವನು ಚಂಗನೆ ಎದ್ದುಕೂತ.

ಇದ್ದಕ್ಕಿದ್ದಂತೆ ಈ ದಿನ ತನಗೇಕೆ ಹೀಗೆ ಅನ್ನಿಸಿತು. ಹಾಗಾದರೆ ನಾನು ಅವಳನ್ನು ಪ್ರೀತಿಸುತ್ತಿದ್ದೇನೆಯೆ? ಇರಬೇಕು. ಅದಕ್ಕೇ ತನಗೆ ಹೀಗಾಗಿದೆ. ಹಾಗಾದರೆ ಮಧುರಳಿಗೂ ತನ್ನ ಬಗ್ಗೆ ಹೀಗೇ ಅನ್ನಿಸುತ್ತದೆಯೆ? ಆ ಬಗ್ಗೆ ಮಾಲತಿಯ ಹತ್ತಿರ ಏನಾದರೂ ಹೇಳಿರಬಹುದೆ..... ಮಾಲತಿಯನ್ನು ಕೇಳಬೇಕು. ಆದರೆ ಈಗ ಇವಳೋ, ದುಷ್ಯಂತನಿಂದ ದೂರವಾದ ಶಕುಂತಲೆಯಂತೆ, ಕಣ್ಣುಮುಚ್ಚಿ ಮಲಗಿದಾಳಲ್ಲ...... ನನಗೆ ತಿಳಿಯುವುದು ಹೇಗೆ! ನಾನು ಅವಳನ್ನೇ ಕೇಳಬೇಕು.... ಹು..... ಹು...... ಗಮನಿಸಬೇಕು. ಅವಳಿಗೆ ತಿಳಿಯದಂತೆ, ನನ್ನ ಬಗ್ಗೆ ಅವಳಿಗೆ ಯಾವ ಭಾವನೆ ಇದೆ ಎನ್ನುವುದನ್ನು ತಿಳಿಯಬೇಕು.

ಹೊಸ ಕೆಲಸವೊಂದು ಗಂಟು ಬಿತ್ತಲ್ಲ ಎನಿಸಿದರೂ ಬೇಸರವೆನಿಸಲಿಲ್ಲ. ಇದು ತನ್ನ ಸ್ವಂತದ ಕೆಲಸ. ಇದರಿಂದ ತನಗೇ ಲಾಭವಿದೆ ಎಂದು ಆಲೋಚಿಸಿದ ಮೋಹನ, ಮಧುರಳ ಬಗ್ಗೆ ಚಿಂತಿಸುತ್ತಾ ಮಧುರವಾದ ಕನಸುಗಳನ್ನು ಹೆಣೆಯಲಾರಂಭಿಸಿದ.

ಮಾಲತಿಗೆ ಇದರ ಅರಿವು ಉಂಟಾಗಲೇ ಇಲ್ಲ. ಈಚೆಗೆ ಮಧುರ ಬರುವುದೂ ಕಡಿಮೆ ಆಗಿತ್ತು. ಊರಿನಲ್ಲಿ ಇದ್ದಷ್ಟು ದಿನವೂ ಮನೋಹರ ದಿನವೂ ಒಂದು ಸಲ ಬರುತ್ತಿದ್ದ. ಇಬ್ಬರೂ ತಿರುಗಾಡಿ ಬರಲು ಹೋಗುತ್ತಿದ್ದರು. ಈಗ ಭವಾನಮ್ಮನ ಆಕ್ಷೇಪಣೆ ಏನೂ ಇರಲಿಲ್ಲ. ಮಾಲತಿ ತನ್ನ ಬಾವಿ ಗಂಡನೊಂದಿಗೆ ಸರಸ ಸಂಭಾಷಣೆಯ ಪ್ರೀತಿಯ ಜಗತ್ತಿನಲ್ಲಿ ವಿಹರಿಸುತ್ತಿದ್ದಳು.

ಅವರಿಬ್ಬರ ನಗೆತುಂಬಿದ ಮುಖ, . ಮಾತು ಕಂಡೊಡನೆ ಮೋಹನನಿಗೆ ತಾನೂ ಹೀಗೇ ಮಧುರಳೊಡನೆ ತಿರುಗಾಡಬೇಕು. ಪ್ರೀತಿಯ ಮಾತುಗಳನ್ನಾಡಬೇಕು ಎಂದೆನಿಸುತ್ತಿತ್ತು. ಆದರೆ, ಅದಕ್ಕೆ ತಕ್ಕ ಸಮಯ

ಒದಗಬೇಕು. ಅವಳಿಗೆ ನನ್ನ ಮೇಲೆ ಪ್ರೀತಿ ಇದೆಯೋ ಇಲ್ಲವೋ ತಿಳಿದುಕೊಳ್ಳಬೇಕು ಎಂದು ಕೊಂಡು ಸುಮ್ಮನಾಗುತ್ತಿದ್ದ. ಅವಳನ್ನು ಕಾಣದೇ ತುಂಬಾ ದಿನಗಳಾಗಿವೆ ಎಂದೆನಿಸುತ್ತಿತ್ತು. ಕಾರಣವಿಲ್ಲದೇ ಅವಳ ಮನೆಗೆ ಹೋಗಲು ಹಿಂಜರಿಯುತ್ತಿದ್ದ. ಮಾಲತಿಯೂ ಹೋಗಿರಲಿಲ್ಲ. ಅವಳೂ ಬಂದಿರಲಿಲ್ಲ.

ಒಂದು ತಿಂಗಳ ಮಟ್ಟಿಗೆ ಮನೋಹರ ಕಲ್ಕತ್ತಾಕ್ಕೆ ವಾಪಸ್ಸು ಹೊರಟ. ಈಗ ಅವನು ಇದ್ದುದ್ದು ಅಲ್ಲೇ. ಹೊರಡುವ ಮುನ್ನ ಮಾಲತಿಯೊಡನೆ ಅಲ್ಲಿ ಇಲ್ಲಿ ಸುತ್ತಾಡಿ, ಮನೆಗೆ ಅವಳನ್ನು ವಾಪಸ್ಸು ಕರೆತಂದು ಬಿಟ್ಟಾಗ, ಅವನು ಯಾರಿಗೂ ಕಾಣದಂತೆ, ಅವಳ ಕೆನ್ನೆಗೆ ಉಡುಗೊರೆಯನ್ನಿತ್ತಿದ್ದ. ಅವನ ಬಿಸಿ ಉಸಿರಿನ ತಾಪ, ಆ ಚುಂಬನ ಅವಳನ್ನು ಮೈಮರೆಸುವಂತೆ ಮಾಡಿತ್ತು. ಆದರೂ ನಾಚಿಕೆಯಿಂದ ಅವನಿಂದ ದೂರ ಸರಿದಿದ್ದಳು.

'ನಾಳೆ ಬೆಳಿಗ್ಗೆ ಹೊರಡ್ತಿದೀನಿ..... ದಿನಕ್ಕೊಂದು ಕಾಗದ ಬರೀಬೇಕು ಮರೆಯಬಾರದು' ಎಂದು ಮತ್ತೊಮ್ಮೆ ಜ್ಞಾಪಿಸಿ, ಅವಳ ಕೆನ್ನೆ ಸವರಿ ನಡೆದಿದ್ದ ಮಾಲತಿ ಕೆಂಪಾಗಿ ಒಳಗೆ ಬಂದಾಗ ಅವಳನ್ನೇ ನೋಡಿದ ಮೋಹನ. ಏನು ನಡೆದಿರಬಹುದೆಂದು ಊಹಿಸಿ ತನ್ನಲ್ಲೇ ನಕ್ಕ. 'ಆಯ್ತು ಇನ್ನು ಇವಳ ಗತಿ' ಎಂದುಕೊಂಡ.

ಬೆಳಿಗ್ಗೆ ರೈಲ್ವೇ ಸ್ಟೇಷನ್‌ಗೆ ಹೋಗಿ ಬರಲು ಅಣ್ಣ ತಂಗಿ ಸಿದ್ಧರಾದರು. ಮದ್ರಾಸಿಗೆ ಹೋಗಿ, ಅಲ್ಲಿ ತಂಗಿಯನ್ನು ಮಾತನಾಡಿಸಿಕೊಂಡು ಅಲ್ಲಿಂದ ರಾತ್ರಿಯ ಹೌರಾ ಎಕ್ಸ್‌ಪ್ರೆಸ್‌ನಲ್ಲಿ ಹೊರಡುವವನಿದ್ದ ಮನೋಹರ.

ಗಾಡಿ ಹೊರಟಿತು. ಫ್ಲಾಟ್ ಫಾರಂನಲ್ಲಿ ನಿಂತಿದ್ದವರಿಗೆ ಕೈಯಾಡಿಸಿದ. ಅವನು ಕಾಣುವವರೆಗೂ ಅಲ್ಲಿ ನಿಂತಿದ್ದು ನಂತರ ಹೊರಟರು.

ತಂಗಿಯ ಮನಸ್ಸಿನಲ್ಲಿ ಏನು ನಡೀತಿದೆ ಎಂದು ಊಹಿಸಿ ಮೋಹನ ಕೇಳಿದ.

"ಮಧುರಳ ಮನೆಗೆ ಬಿಡ್ಲೇನೇ ನಿನ್ನನ್ನ......?"

'ಹುಂ' ಎಂದಳು ಅನ್ಯಮನಸ್ಕಳಾಗಿ.

ಅವಳ ಮನೆ ಮುಂದೆ ಸ್ಕೂಟರನ್ನು ನಿಲ್ಲಿಸಿ, ಅವಳು ಇಳಿದ ಮೇಲೆ ಅವಳ ಕೈಗೆ ಒಂದಿಷ್ಟು ಹಣವನ್ನಿತ್ತ.

"ನಿನಗೆ ಇವತ್ತು ಸಮಯ ಕಳೆಯುವುದು ಕಷ್ಟ ಅಂತ ಅರ್ಥವಾಗ್ತಿದೆ. ನೀವಿಬ್ಬರೂ ಯಾವುದಾದರೂ ಸಿನಿಮಾಕ್ಕೆ ಹೋಗಿ ಬನ್ನಿ"

"ಥ್ಯಾಂಕ್ ಯೂ ಮೋಹನ" ಎಂದಳು.

ಮಧುರ ಬಂದು ಸ್ನೇಹಿತೆಯನ್ನು ಸ್ವಾಗತಿಸುವವರೆಗೂ ಅಲ್ಲಿಯೇ ಕಾದುನಿಂತಿದ್ದ. ಅವಳು ಹಿಂತಿರುಗಿ ನೋಡಿದಾಗ, ಇಬ್ಬರಿಗೂ ಅನ್ವಯಿಸುವಂತೆ ಕೈಯಾಡಿಸಿದ. ತನಗೆ ತಾನೇ ಏನೋ ಸಂಭ್ರಮಪಟ್ಟವನಂತೆ ಆನಂದಿಸಿದ.

"ಅಬ್ಬಾ, ನೀನೇಲ್ಲಿ ಮರೆತು ಬಿಟ್ಟೆಯೋ ನನ್ನನ್ನು ಎಂದುಕೊಂಡಿದ್ದೆ" ಎಂದಳು ಮಧುರ ನಗುತ್ತಾ.

"ಒಂಥರ ಮರೆತೇಬಿಟ್ಟದ್ದೆ. ಜ್ಞಾಪಿಸಿ ಕರೆತಂದವನು ಮೋಹನ ಕಣೇ. ಇವತ್ತಿನ ನನ್ನ ಸ್ಥಿತಿ ಅವನಿಗೆ ಮಾತ್ರ ಅರ್ಥವಾಗಿದೆ" ನಿಜವನ್ನೇ ಆಡಿದ್ದಳು.

"ನೀನು ಅದೃಷ್ಟವಂತೆ ಕಣೇ. ಮಾಲತಿ, ಎಂತಹ ಒಳ್ಳೆಯ ಅಣ್ಣಾಇದ್ದಾನೆ ನಿನಗೆ...... ನನಗೂ ಅಂತಹ ಒಬ್ಬ ಅಣ್ಣ ಇದ್ದಿದ್ದರೆ ಅಂತ ಎಷ್ಟೋ ಸಲ ಅಂದುಕೊಂಡಿದೀನಿ ಗೊತ್ತಾ?"

"ಅಂತಹ ಅಣ್ಣ ನನಗೆ ಮಾತ್ರ; ನಿನಗೆ ಬೇಕಾದ್ರೆ ಅಂತಹ ಗಂಡ ಸಿಗಲಿ ಅಂತ ಹಾರೈಸ್ತೀನಿ....."

"ಸಾಕು ತಮಾಷೆ....."

"ತಮಾಷೆಯಲ್ಲ ಮಧುರ....... ನನ್ನ ಅಣ್ಣನಂತಹ ಗಂಡ ಸಿಗಬೇಕಾದರೆ ನೀನು ಬಹಳ ಪುಣ್ಯ ಮಾಡಿರಬೇಕು." ಅವಳ ಮಾತು ಕೇಳಿಸದವಳಂತೆ ಮಧುರ ಒಳಗೆ ನಡೆದಳು.

"ಏನೇ, ಯಾರೂ ಇಲ್ವೇನೇ, ಸದ್ದೇ ಇಲ್ಲ"

"ಅಪ್ಪ, ಅಮ್ಮ ಯಾವುದೋ ಮದುವೆಗೆ ಹೋಗಿದ್ದಾರೆ. ರಾಗಿಣಿ ಸ್ಕೂಲಿಗೆ ಹೋಗಿದ್ದಾಳೆ."

"ನೀನೇಕೆ ಹೋಗಲಿಲ್ಲ ಮದುವೆಗೆ?"

"ನೀನು ಬರ್ತೀಯಾ ಅಂತ ಕನಸು ಬಿದ್ದಿತ್ತು" ನಕ್ಕಿದ್ದಳು.

"ನಾನಾಗಿದ್ದಿದ್ದರೆ, ಯಾರದೇ ಆದರೂ ಆ ಮದುವೆಗೆ ಹೊರಟುಬಿಡ್ತಿದ್ದೆ. ಒಬ್ಬಳೇ ಅಂತೂ ಇರುತ್ತಿರಲಿಲ್ಲ."

"ನನಗೆ ಆ ಮದುವೆ ಗದ್ದಲ ಗೌಜು ಎಂದರೆ ಬೇಜಾರು ಕಣೇ"

"ಹಾಗಂತ ನನ್ನ ಮದುವೆಗೂ ಬರದೇ ಇರಬೇಡ. ನಾನಂತೂ ಅದ್ಧೂರಿಯಾಗಿ ಮದುವೆ ಮಾಡಿಕೊಳ್ಳುವವಳು."

"ಬರ್ತೀನಿ. ನಿನಗೋಸ್ಕರ ಅದನ್ನೆಲ್ಲ ಸಹಿಸ್ತೀನಿ"

"ನನ್ನ ಸ್ನೇಹಿತೆಯಾಗಿದ್ದೂ ನೀನ್ಯಾಕೆ ಹೀಗೆ ಅಜ್ಜಿ ತರಹ ಆಡ್ತೀಯಾ!

ಈ ವಯಸ್ನಲ್ಲಿ ಎಂಜಾಯ್ ಮಾಡದೇ ಮುದುಕಿ ಆದ್ಮೇಲೆ ಮಾಡ್ತೀಯಾ?"

"ಇದೆಲ್ಲಾ ಎಂಜಾಯ್‌ಮೆಂಟ್ ಅಂತ ನನಗೆ ಅನ್ನಿಸಲ್ಲ. ನನಗೆ ಇದೇ ಸರಿ ಅನ್ನಿಸುತ್ತೆ. ನಾನೂ ನಿನ್ನ ತರಹವೇ ಇದ್ದಿದ್ದರೆ, ನನ್ನ ನಿನ್ನ ಸ್ನೇಹ ಇಷ್ಟು ದಿನ ಮುಂದುವರೆಯುತ್ತಲೇ ಇರಲಿಲ್ಲ"

"ಕರೆಕ್ಟ್, ನಾನೂ ನೀನೂ ಒಂದೇ ತರಹ ಇದ್ದಿದ್ದರೆ, ಖಂಡಿತಾ ನಮ್ಮ ನಮ್ಮಲ್ಲಿ ಪೈಪೋಟಿ ಇರ್ತಿತ್ತು. ಒಂಥರಕ್ಕೆ ಒಳ್ಳೆಯದೇ ಬಿಡು. ನಾನೂ ಹೊರಟು ಹೋದರೆ ನಿನಗೆ ಸ್ನೇಹಿತೆಯರೇ ಇರೋಲ್ಲವಲ್ಲೇ. ಏನ್ಮಾಡ್ತೀಯಾ?"

"ಸಂಗೀತ..... ಸಂಗೀತವೇ ನನ್ನ ಸ್ನೇಹಿತೆ"

"ಸಂಗೀತ ಅನ್ನುತ್ತಲ್ಲ ನನಗೊಂದುಸಂಗತಿ ನೆನಪಿಗೆ ಬಂತು. ಮೊದಲ ದಿನ ಮನೋಹರ ನಮ್ಮ ಮನೆಗೆ ಬಂದಿದ್ದರಲ್ಲ. ಅವತ್ತು ಏನು ತಮಾಷೆ ನಡೀತು ಗೊತ್ತಾ?" ಎನ್ನುತ್ತಾ ಆ ದಿನ ತಾನು ಹಾಡು ಹೇಳಿದ್ದು, ಕಡೆಯಲ್ಲಿ ರಾಗಿಣಿ ಜನಗಣಮನ..... ಹೇಳಿದ್ದನ್ನು ತಿಳಿಸಿ, ಮತ್ತೆ ಮತ್ತೆ ನಕ್ಕಳು.

ಮಧುರಂಗೂ ನಗು ಬಂತು. ತಂಗಿಯ ಮೇಲೆ ಸಿಟ್ಟೂ ಬಂತು.

"ಹೌದೇನೆ? ಅವಳು ಹೇಳಲೇ ಇಲ್ಲವಲ್ಲ. ನಿಮ್ಮಮ್ಮನಿಗೆ ಖಂಡಿತಾ ಸಿಟ್ಟು ಬಂದಿರಬೇಕು ಅಲ್ವಾ!"

"ಅವತ್ತಿನ ಆ ಟೆನ್ಷನ್ ಹೇಗಿತ್ತು ಗೊತ್ತಾ? ಎಲ್ಲಾ ದಿಗ್ಭ್ರಮೆ ಹಿಡಿದವರಂತೆ ನಿಂತುಬಿಟ್ಟಿದ್ದೆವು. ಈಗ ನೆನೆಸಿಕೊಂಡರೆ ನಗು ಬರುತ್ತೆ"

"ಸಾರಿ ಮಾಲತಿ, ನನಗೀ ವಿಷಯವೇ ಗೊತ್ತಿರಲಿಲ್ಲ."

"ನೀನ್ಯಾಕೆ ಸಾರಿ ಕೇಳಬೇಕು! ಮನೋಹರನ ತಂದೆ ತುಂಬಾ ಸೋಷಿಯಲ್. ತಕ್ಷಣ ಅವಳನ್ನು ಕರೆದು ಮೆಚ್ಚುಗೆ ಸೂಚಿಸಿದರು"

"ಏನೂಂತ, ಬಹದ್ದೂರ್ ಹೆಣ್ಣು ಅಂತಲೆ?"

ಮಾಲತಿ ನಕ್ಕಳು.

"ರಾಗಿಣಿ ಬಹದ್ದೂರ್ ಹೆಣ್ಣೇ ಸರಿ. ಆದರೆ ಅವಳ ಅಕ್ಕ ನೀನು?"

"ನಾನು ಏನೇ ಇರಲಿ, ಬಿಡು. ಆ ದಿನ ಅವಳ ಅವಿವೇಕದಿಂದ ನಿಮಗೆಲ್ಲಾ ಅವಮಾನವಾಗಿದ್ದರೆ ಏನು ಮಾಡಬೇಕಾಗಿತ್ತು ಹೇಳು...."

"ಹೋಗಲಿ ಬಿಡು, ಏನೂ ಆಗಲಿಲ್ಲವಲ್ಲ. ನೀನೇಕೆ ಅಪ್ಸೆಟ್ ಆಗ್ತೀಯಾ?"

"ನನ್ನ ತರಹ ರಾಗಿಣಿ ಅಲ್ಲ ಸರಿ. ಆದರೆ ಆ ಚೆಲ್ಲುತನ ನನಗೆ ಹಿಡಿಸಲ್ಲ"

"ಇನ್ನೂ ಚಿಕ್ಕವಳು, ದಿನ ಕಳೆದಂತೆ ಗಂಭೀರವಾಗ್ತಾಳೆ ಬಿಡು"

"ಎಲ್ಲಾ ಸರಿ ಹೋದುದರಿಂದ ಈ ಮಾತನ್ನು ಹೇಳ್ತಿದ್ದೀಯ..... ಒಂದುವೇಳೆ ಅದೇ ದೊಡ್ಡ ರಂಪವಾಗಿದ್ದಿದ್ದರೇ....."

"ಸುಮ್ಮನಾಗ್ತೀಯಾ? ನಿನಗೆ ಈ ವಿಷಯ ಹೇಳಲೇಬಾರದಾಗಿತ್ತು. ನಿನಗೆ ಹೆದರಿ ರಾಗಿಣಿ ಈ ವಿಷಯ ತಿಳಿಸಿಲ್ಲ. ಹೊಟ್ಟೆ ಹಸೀತಿದೆ. ಏನಾದ್ರೂ ತಿಂಡಿ ಇದೆಯಾ?"

"ಹುಂ. ನೋಡ್ತೀನಿ" ಎನ್ನುತ್ತಾ ಮಧುರ ಒಳಗೆ ಹೋದಳು. ಕೆಲವೇ ನಿಮಿಷಗಳಲ್ಲಿ ಒಂದು ದೊಡ್ಡ ತಟ್ಟೆಯಲ್ಲಿ ಚಕ್ಕುಲಿ, ಕೋಡುಬಳೆಗಳನ್ನು ತಂದಿತ್ತಳು.

"ಊಟ ಮಾಡ್ತೀಯೋ, ಇದನ್ನು ತಿಂತೀಯೋ?"

"ಊಟಾನೇ ಮಾಡ್ತೀನಿ ಕಣೇ.... ಬೆಳಿಗ್ಗೆ ತಿಂಡಿ ಸಹ ಸೇರಲಿಲ್ಲ"

"ನಡೀ ಹಾಗಾದ್ರೆ" ಎನ್ನುತ್ತಾ ಅವಳನ್ನು ಊಟದ ಮನೆಗೆ ಕರೆದೊಯ್ದಳು.

"ನಿಮ್ಮ ತಾಯಿ ತುಂಬಾ ಚೆನ್ನಾಗಿ ಅಡಿಗೆ ಮಾಡ್ತಾರೆ ಕಣೇ"

"ಇವತ್ತಿನ ಅಡಿಗೆ ನನ್ನದು. ಊಟ ಮುಗಿಸು. ಆಮೇಲೆ ಹೊಗುಳುವಂತೆ"

"ನೀನೇ ವಾಸಿ ಕಣೇ ಎಲ್ಲಾ ಕಲಿತಿದೀಯ..... ನನಗೆ ಏನೂ ಬರಲ್ಲ"

"ನಿನ್ನ ಗಂಡನ ಮನೆಗೆ ಹೋದಮೇಲೆ ಕಲಿ, ಅದೇನು ಕಷ್ಟ?"

"ಅವನಿಗೆ ಹೇಳಿಕೊಡಕ್ಕೆ ಬರಬೇಕಲ್ಲಾ?"

"ಅದೂ ಸರಿ, ಹೋಟೆಲ್ಲುಗಳಿರುವುದು ಏತಕ್ಕೆ? ನಿನ್ನಂತಹವರಿಗಾಗೇ ತಾನೇ.....?"

"ಒಂದು ತಿಂಗಳ ಟೈಮಿದೆ. ಇವತ್ತಿಂದಲೇ ಎಲ್ಲಾ ಕಲಿತೀನಿ. ನೀನೇ ನನ್ನ ಗುರು."

"ನಮ್ಮ ಮನೆ ಅಡಿಗೆ ರುಚಿ ನಿನ್ನ ಗಂಡನಿಗೆ ಹಿಡಿಸಬೇಕಲ್ಲಾ?"

"ನಾನು ಹಿಡಿಸಿದ ಮೇಲೆ, ನಾನು ಏನೇ ಅಡಿಗೆ ಮಾಡಿ ಬಡಿಸಿದರೂ ತಿನ್ನಲೇಬೇಕು. ಇಲ್ಲದಿದ್ದರೆ ಅವನಿಗೇ ಖರ್ಚು"

"ಸರಿ. ಈಗ ಊಟ ಮಾಡು."

ನಿಧಾನವಾಗಿ ಎಲ್ಲಾ ಕಲಿತ್ಕೋ... ಆಮೇಲೆ ದಿನಕ್ಕೊಂದು ಕಾಗದ ಬರೆದು, ನಿನ್ನ ಗಂಡನಿಗೆ ಏನೇನು ಮಾಡಿ ಬಡಿಸಿದೆ ಅಂತ ತಿಳಿಸು.

"ದಿನಕ್ಕೊಂದು ಕಾಗದ ಅನ್ನುತ್ಲೇ ಜ್ಞಾಪಕಕ್ಕೆ ಬಂತು. ಒಂದು ಕವರ್, ಒಂದು ಹಾಳೆ, ಪೆನ್ನು ಕೊಡು. ಈಗಲೇ ಒಂದು ಕಾಗದ ಬರೆದು ಪೋಸ್ಟ್

ಮಾಡಬೇಕು"

"ಕಲ್ಲತ್ತಾ ತಲುಪುವುದು ನಾಡಿದ್ದು......"

"ಅವನಿಗಿಂತ ಮುಂಚೆ ನನ್ನ ಕಾಗದ ತಲುಪಲಿ. ಏನೀಗ?"

ಲವ್ ಲೆಟರ್‌ನ, ನಿನ್ನ ರೂಮಿನಲ್ಲಿ, ಏಕಾಂತದಲ್ಲಿ ಒಕ್ಕಣೆಯಾಗಿ ಬರಿ. ಇಲ್ಲಿ ನನ್ನ ಎದುರಿಗೆ ಬರೆಯಲು ಖಂಡಿತಾ ಸಾಧ್ಯವಿಲ್ಲ.

"ಹಾಗಾದ್ರೆ ನಾನೀಗಲೇ ನಮ್ಮ ಮನೆಗೆ ಹೋಗ್ತೀನಿ"

ಊಟ ಮುಗಿಸಿ ಕೈ ತೊಳೆದು ಅವಳು ಕೊಟ್ಟ ತಿಂಡಿಗಳ ಪ್ಯಾಕೆಟ್ಟನ್ನು ಹಿಡಿದು ಹೊರಟೇಬಿಟ್ಟಳು ಮಾಲತಿ. ಮೋಹನ ಅವಳ ಕೈಗೆ ಕೊಟ್ಟಿದ್ದ ದುಡ್ಡನ್ನು ಅಲ್ಲೇ ಮರೆತಳು. ಆಟೋ ಹಿಡಿದು ಮನೆಮುಂದೆ ಇಳಿದಾಗಲೆ ದುಡ್ಡಿನ ನೆನಪಾದದ್ದು. ತನ್ನ ಅವಾಂತರಕ್ಕೆ ಮಧುರ ನಕ್ಕಳೋ ಏನೋ.... ನಕ್ಕರೆ ನಗಲಿ, ಈ ನನ್ನ ಸ್ಥಿತಿ ಅವಳಿಗೂ ಇದ್ದಿದ್ದರೆ ಅವಳಿಗೂ ಅರ್ಥವಾಗುತ್ತಿತ್ತು ಎಂದುಕೊಂಡು ಒಳಗಿನಿಂದ ಹಣವನ್ನು ತಂದು ಆಟೋದವನಿಗೆ ಕೊಟ್ಟಳು.

ತನ್ನ ಊಟವಾಯಿತೆಂದು, ತಾಯಿಗೆ ತಿಳಿಸಿ, ತನ್ನ ರೂಮಿಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು. ಪೆನ್ನು ಕಾಗದ ಹಿಡಿದು ಕುಳಿತರೂ ಹೇಗೆ ಪ್ರಾರಂಭಿಸುವುದೆಂದು ತಿಳಿಯಲಿಲ್ಲ. ಮೊದಲು ಅವನ ಕಾಗದ ಬರಲಿ ಎಂದುಕೊಂಡು ಪೇಪರ‍್ರು ಪೆನ್ನನ್ನು ಅತ್ತ ಇಟ್ಟು ಮಲಗಿದಳು.

ಮನೋಹರನ ಮೊದಲ ಕಾಗದ ಅವಳ ಕೈ ಸೇರಿದಾಗ, ಅವಳು ಕುಣಿದು ಕುಪ್ಪಳಿಸುವುದೊಂದು ಬಾಕಿ. ಹತ್ತಾರು ಬಾರಿ ಓದಿದರೂ ಮತ್ತೆ ಮತ್ತೆ ಓದಬೇಕು ಎನಿಸಿತ್ತು. ಮೋಹನ ತಮಾಷೆ ಮಾಡಿದ.

"ಕಾಲೇಜಿನ ಪರೀಕ್ಷೆಗೂ ನೀನು ಇಷ್ಟು ರಿವಿಷನ್ ಮಾಡಿರಲಿಲ್ಲ"

ತಕ್ಷಣವೇ ಮಾರುದ್ದ ಕಾಗದವನ್ನು ಅವನು ಬರೆದ ರೀತಿಯಲ್ಲೆ, ಬರೆದಳು. ಅವನು ಕೇಳಿದ್ದಕ್ಕೆಲ್ಲಾ ಉತ್ತರಿಸಿದ್ದಳು. ಬರೆದು ಮುಗಿಸಿ, ಕವರಿನೊಳಗೆ ಮಡಿಚಿಟ್ಟು, ತಾನೇಪೋಸ್ಟ್ ಮಾಡಲು ಹೊರಟಳು. ಹಾಗೇ ಮಧುರಳ ಮನೆಗೆ ಬಂದಳು. ಮಧುರ ಯಾರೋ ಇಬ್ಬರು ಹುಡುಗಿಯರಿಗೆ ಸಂಗೀತ ಪಾಠ ನಡೆಸಿದ್ದಳು. ಇವಳು ಅವಳಿಗಾಗಿ ಕಾಯುತ್ತಾ ಕುಳಿತಿದ್ದಳು. ಅವಳ ಅಮ್ಮ ಬಂದು, ಏನಮ್ಮ ಹೇಗಿದೀಯ? ಎಂದಷ್ಟೇ ವಿಚಾರಿಸಿ ಹೊರಟು ಹೋದಳು. ಮಧುರ ಬರುವುದನ್ನೇ ಕಾದಿದ್ದು,

"ಇದೇನೇ ಇದು, ಸಂಗೀತದ ಕ್ಲಾಸ್‌ನ ಯಾವಾಗ್ನಿಂದ ಶುರು ಮಾಡ್ದೆ!"

"ನೆನ್ನೆಯಿಂದ. ಅಕ್ಕಪಕ್ಕದ ಮನೆಯ ಹುಡುಗಿಯರು, ಅವರುಗಳ

ತಾಯಿಯರು ಬಂದು ಸಂಗೀತ ಹೇಳಿಕೊಡ್ತೀರಾ ಅಂದರು. ಒಪ್ಪಿಕೊಂಡೆ. ಸಮಯ ಕಳೆಯಕ್ಕೆ ನನಗೂ ಒಂದು ಉದ್ಯೋಗ ಬೇಕಲ್ಲ....."

"ಯಾರಿಗೂ ಜನಗಣಮನ ಮಾತ್ರ ಹೇಳಿಕೊಡಬೇಡ" ಒಟ್ಟಿಗೆ ನಕ್ಕರು.

"ಮನೋಹರ ಕಾಗದ ಬರೆದಿದ್ದಾನೆ ಕಣೇ...." ತಾನೇ ಎಲ್ಲಾ ವರದಿ ಒಪ್ಪಿಸಿ, ತಾನು ಮರುತ್ತರ ಬರೆದು ಹಾಕಿದುದನ್ನು ತಿಳಿಸಿದಳು. ಮಧುರ ಸುಮ್ಮನೇ ಆಲಿಸಿದಳು. ಆ ದಿನ ಮಧುರನ ಮನೆಯಲ್ಲೇ ಬಿಟ್ಟುಹೋದ ಹಣದ ನೆನಪು ಬಂತು.

"ಸಿನಿಮಾಕ್ಕೆ ಹೋಗಿಬರೋಣವೇನೇ! ಆವತ್ತು ಸಿನಿಮಾಕ್ಕೆ ಹೋಗು ಅಂತ ಮೋಹನ್ ಹಣ ಕೊಟ್ಟಿದ್ದ. ನೀನು ಒಬ್ಬಳೇ ಇದ್ದೆ. ಹೋಗಲಿಲ್ಲವಲ್ಲ"

"ತಡಿ, ಅಮ್ಮನ ಕೇಳಿ ಬರ್ತೀನಿ" ಮರುಗಳಿಗೆಯಲ್ಲಿ ಒಪ್ಪಿಗೆಯೊಡನೆ ಬಂದಳು. ತಕ್ಷಣ ಹೊರಟರು.

"ಇದೇನೇ ಹೀಗೆ ಬರ್ತೀಯಾ..... ಸೀರೆ ಬದಲಾಯಿಸಲ್ವಾ!"

"ಸಿನಿಮಾ ನೋಡಕ್ಕೆ ಈ ಸೀರೆ ಸಾಕು ಸರಿಯಾಗಿದೆ. ನಾನು ಬದಲಾಯಿಸಲ್ಲ"

"ನೀನು ಹೀಗೇ ಇದ್ದರೆ, ನಿನ್ನನ್ನು ಮದುವೆಯಾಗುವವನು ಒಂದೇ ತಿಂಗಳಿನಲ್ಲಿ ಇನ್ನೊಬ್ಬಳ ಹಿಂದೆ ಓಡಿ ಹೋಗ್ತಾನೆ...... ನೋಡ್ತಿರು"

"ಅಂತಹವನನ್ನು ನಾನು ಮದುವೆ ಯಾಗುವುದೇ ಇಲ್ಲ"

"ಅಂತಹವರು ಈ ಕಾಲದಲಲ್ಲಿ ಅಪರೂಪ. ಮನೋಹರ ಅಂತೂ, ದಿನಕ್ಕೊಂದು ಸೀರೆ, ನನ್ನ ಅಲಂಕಾರಗಳ ಬಗ್ಗೆ ನನಗೆ ಲೆಕ್ಚರನ್ನೇ ಕೊಟ್ಟ"

"ಎಲ್ಲರೂ ಹಾಗೇ ಇರುವುದಿಲ್ಲ. ನನ್ನ ಅಭಿರುಚಿಗೆ ತಕ್ಕಂತಹವರೂ ಇರ್ತಾರೆ. ಅಂತಹವನು ಸಿಗುವವರೆಗೂ ನಾನು ಮದುವೆಯಾಗಲ್ಲ"

"ಹಾಗಾದ್ರೆ ನಿನಗೀ ಜನ್ಮದಲ್ಲಿ ಮದುವೆಯಿಲ್ಲಬಿಡು"

"ಆಗದಿದ್ದರೆ ನಷ್ಟವಿಲ್ಲ ಬಿಡು. ನನಗೆ ಮದುವೆಯಾಗುವ ಹಂಬಲವಿಲ್ಲ"

"ನನ್ನ ಎದುರಿಗೆ ಹಾಗಂತೀಯಾ..... ನಿಜ ಹೇಳು..... ಮಧುರ"

"ನಿಜ ಹೇಳಿದ್ರೆ ಸುಳ್ಳು ಅಂತೀಯ. ಸುಳ್ಳು ಹೇಳಿದ್ರೆ ನಂಬೋಲ್ಲ.... ನಿನ್ನನ್ನು ಮೆಚ್ಚಿಸಕ್ಕೆ ಆ ಮನೋಹರನೇ ಗತಿ"

"ಕರೆಕ್ಟ್" ಎನ್ನುತ್ತಾ ಮಾಲತಿ ಮತ್ತೆ ಮನೋಹರನ ಬಗ್ಗೆ ಹೇಳತೊಡಗಿದಳು. ಥಿಯೇಟರ್ ಬಳಿ ಬಂದಾಗ ಮಾತು ನಿಲ್ಲಿಸಿದಳು. ಯಾವುದೋ ಹಳೇ ಸಿನಿಮಾ •ರಷ್ ಇರಲಿಲ್ಲ. ಬಾಲ್ಕನಿಯ ಎರಡು ಟಿಕೆಟ್ಟನ್ನು ಕೊಂಡು ಸೀಟನ್ನು ಹುಡುಕಿ ಕುಳಿತರು. ಆಗ ಇದ್ದಕ್ಕಿದ್ದಂತೆ ಮಾಲತಿಗೆ ಅನ್ನಿಸಿತು,

'ಮನೋಹರ ಮತ್ತು ತಾನು ಇಬ್ಬರೂ ತಿರುಗಾಡಿ ಮಾತನಾಡಿದ್ದೇವೆ ಹೊರತು, ಸಿನಿಮಾಕ್ಕೆ ಎಂದೂ ಬಂದಿರಲಿಲ್ಲವೆಂದು' ಮುಂದಿನ ಕಾಗದದಲ್ಲಿ ಅದನ್ನು ಮರೆಯದೇ ಬರೆಯಬೇಕೆಂದು ಕೊಂಡಳು.

ಮದುವೆಯ ದಿನಗಳು ಸಮೀಪಿಸಿದಂತೆ, ಸಿದ್ಧತೆಯೂ ಭರಾಟೆಯಿಂದ ಸಾಗಿತು. ಜವಳಿ, ಒಡವೆ ಮುಂತಾದವುಗಳನ್ನು ಖರೀದಿಸಿಯಾಗಿತ್ತು. ಛತ್ರಕ್ಕೆ ಅಡ್ವಾನ್ಸ್ ಕೊಟ್ಟಾಗಿತ್ತು. ಅಡಿಗೆಗೆ ಕಾಂಟ್ರಾಕ್ಟ್ ಕೊಟ್ಟಾಗಿತ್ತು. ಉಳಿದಿದ್ದು ಆಹ್ವಾನ ಪತ್ರಿಕೆಯನ್ನು ಹಂಚುವ ಕೆಲಸ. ನೆಂಟರ ಮನೆಗೆಲ್ಲ ಗಂಡ ಹೆಂಡತಿಯೇ ಹೋಗಿ ಕರೆದು ಬಂದರು. ಮಾಲತಿ, ಮಧುರಳ ಜತೆಯಲ್ಲಿ ಹೋಗಿ ತನ್ನ ಸ್ನೇಹಿತೆಯರಿಗೆ ಕೊಟ್ಟು ಬಂದಳು. ಮೋಹನ ತನ್ನ ಸ್ನೇಹಿತರಿಗೆ ಕೊಟ್ಟಿದ್ದ.

ಒಂದು ದಿನ ಇದ್ದಕ್ಕಿದ್ದಂತೆ ಮಾಲತಿ, ಮೋಹನನನ್ನು ಹಣ ಕೇಳಿದಳು.

"ಒಂದೆರಡು ಸಾವಿರ ರೂಪಾಯಿ ಬೇಕಿತ್ತು. ಬೇಕಾದ್ರೆ ಸಾಲ ಅಂತ ಕೊಟ್ಟಿರು. ಆಮೇಲೆ ಕೊಡಿಸ್ತೀನಿ"

"ಷಟಪ್" ನನ್ನ ಹತ್ತಿರ ಸಾಲ ಅಂತ ಮಾತನಾಡ್ತೀಯಲ್ಲ. ನಾಚಿಕೆ ಆಗೊಲ್ಲವೆ ನಿನಗೆ? ನೀನು ಹಣ ಕೇಳಿದ್ರೆ ಇಲ್ಲ ಎನುವಷ್ಟು ಬಡತನ ಬಂದಿಲ್ಲ ನನಗೆ. ಎಷ್ಟು ಬೇಕು ಅಂದೆ? ಎಂದು ರೇಗಿದ ಮೋಹನ.

"ಸಾರಿ ಕಣೋ..... ಆದರೆ ಅಮ್ಮನಿಗೆ ಹೇಳಬೇಡ"

"ಹಾಗಾದ್ರೆ, ರಹಸ್ಯವಾಗಿ ಮನೋಹರನಿಗೆ ಏನೋ ಉಡುಗೊರೆ ತಗೋಬೇಕು ಅಂತ ಅಂದ್ಕೊಂಡಿದೀಯ?"

"ಮನೋಹರಂಗಲ್ಲ...... ಮಧುರಂಗೆ. ನಮ್ಮಿಬ್ಬರ ಸ್ನೇಹದ ನೆನಪಿಗೆ, ಅವಳಿಗೆ ಒಂದು ರೇಶಿಮೆ ಸೀರೆ ಕೊಡೋಣ ಅಂತ ಅನ್ನಿಸ್ತು"

ಮೋಹನ ಗಲ್ಲ ಉಜ್ಜಿಕೊಂಡ.

"ರಾಗಿಣಿಗೂ ಏನಾದ್ರೂ ಕೊಡಬೇಕು"

"ಯಾಕೆ? ರಾಷ್ಟ್ರಗೀತೆ ಹಾಡಿದ್ದಕ್ಕಾ?"

"ಪಾಪ, ಅವತ್ತು ನಿನ್ನ ಜತೆಗೂ ತಂತಿಮೀಟಿ ಅವಳಿಗೂ ಸುಸ್ತಾಗಿರಬೇಕು ಖಂಡಿತಾ....."

"ಎಂತಹ ಖಿಲಾಡಿ ಗೊತ್ತಾ? ಮಧುರಂಗೆ ಹೇಳೇ ಇಲ್ಲವಂತೆ"

"ನಾನೇ ಹೇಳಬೇಡ ಅಂತ ಎಂದಿದ್ದೆ......"

"ಓ..... ರಾಗಿಣೀನ ಅದೇನು ಅಷ್ಟು ಮುಚ್ಚಿಟ್ಟುಕೊಳ್ತೀಯಾ?"

"ನನ್ನ ಕಣ್ಣೆದುರಿನಲ್ಲಿ ಬೆಳೆದವಳು..... ಒಂಥರಾ ಸ್ನೇಹಾ...." ರಾಗವಾಗಿ ನಡಿದ.

"ನೀನು ಅವಳನ್ನೇ ಮದುವೆ ಯಾಗು ಅಂತ ಅಡ್ವೈಸ್ ಮಾಡ್ತೀನಿ...." ನಗುತ್ತಾ ನುಡಿದಳು.

"ಹುಂ. ಅವಳು ಒಪ್ಪಿದ್ರೆ ಖಂಡಿತಾ ಆಗ್ತೀನಿ. ನನಗೂ ಅವಳಿಗೂ ಏನಿಲ್ಲ ಅಂದರೂ, ಹದಿಮೂರು ಹದಿನಾಲ್ಕು ವರ್ಷ ವ್ಯತ್ಯಾಸವಿರಬಹುದು ಅಷ್ಟೇ..... ಯಾರಾದ್ರೂ ಕೇಳಿದ್ರೆ ಮೂರನೇ ಹೆಂಡತಿ ಅಂತ ಹೇಳಬಹುದು." ಇಬ್ಬರೂ ನಕ್ಕರು.

ಭವಾನಮ್ಮ ಹೊರಗೆ ಬಂದಾಗ ಇಬ್ಬರೂ ಸುಮ್ಮನಾದರು.

ಸಾಯಂಕಾಲ ಇಬ್ಬರೂ ಸೀರೆ ಅಂಗಡಿ ಕಡೆ ಹೊರಟರು. ಮೋಹನ ತನಗಿಷ್ಟವಾದ, ಮಧುರಂಗೆ ಒಪ್ಪುವಂತಹ ಬಣ್ಣದ ಸೀರೆಯನ್ನು ಆಯ್ಕೆ ಮಾಡಿದಾಗ ಮಾಲತಿ ಮೆಚ್ಚಿದಳು.

"ಎಂತಹ ಒಳ್ಳೆಯ ಆಯ್ಕೆ ನಿನ್ನದು. ಒಳ್ಳೆಯ ಗಂಡನಾಗುವ ಅರ್ಹತೆ ನಿನ್ನಲ್ಲಿದೆ."

"ಇದು ಅಂಗಡಿ, ಮನೆಯಲ್ಲ. ರಾಗಿಣಿಗೆ ಏನು ತಗೊಳ್ಳೋಣ ಹೇಳು!" ಇಂಥದೇ ಒಂದು ಸೀರೆ.

"ಸೀರೆ! ಸೀರೆ ಉಡುವ ವಯಸ್ಸೇನೇ ಅವಳದು?"

"ನಿನ್ನ ಮೂರನೇ ಹೆಂಡತಿಯ ವಯಸ್ಸು.... " ಮಾಲತಿ, ನಕ್ಕಾಗ, ಅವನಿಗೂ ನಗು ಬಂತು.

"ಒಂದು ಚೂಡಿದಾರ್ ಸೆಟ್, ರೆಡಿಮೇಡ್‌ದು ನೋಡೋಣ. ಏನಂತೀಯಾ?"

"ಹುಂ.... ನಡೀ, ನೀನೇ ಸೆಲೆಕ್ಟ್ ಮಾಡು...."

ಸೀರೆಯ ಬಿಲ್ ಹಣವನ್ನು ಕೊಟ್ಟು ಹತ್ತಿರದ ರೆಡಿಮೇಡ್ ಅಂಗಡಿಗೆ ಬಂದರು. ರಾಗಿಣಿಗೆ ಒಪ್ಪವಂತಹ ಸಲ್ವಾರ್ ಕಮೀಜನ್ನು ಆಯ್ಕೆ ಮಾಡಿದರು.

"ಇದನ್ನು, ಅಮ್ಮನಿಗೆ ಕಾಣದಂತೆ ಹೇಗೆ ಮುಚ್ಚಿಡುವುದು?"

"ನನ್ನ ಹತ್ತಿರ, ನನ್ನ ಬಟ್ಟೆಗಳ ಜತೆಯಲ್ಲಿಡ್ತೀನಿ. ಅಮ್ಮಂಗೆ ಖಂಡಿತಾ ಗೊತ್ತಾಗಲ್ಲ"

"ಸರಿಯಪ್ಪಾ. ಹಾಗಾದ್ರೆ ನೀನೇ ಇಟ್ಟುಕೋ"

ಸ್ಕೂಟರಿನಿಂದ ಇಳಿದು ಬರೀ ಕೈಯಲ್ಲಿ ಅವಳು ಮುಂದೆ ಹೋದಳು.

ಹಿಂದಿನಿಂದ ಮೋಹನ ಸೀರೆಬಟ್ಟೆಗಳ ಪ್ಯಾಕೆಟ್ಟನ್ನು ಹೊತ್ತು ಬಂದ.

ಮಗನ ಕೈಯಲ್ಲಿದ್ದ ಪ್ಯಾಕೆಟ್ಟುಗಳನ್ನು ನೋಡಿ ಭವಾನಮ್ಮ ಕಣ್ಣರಳಿಸಿದರು.

"ಏನೋ ಅದು! ಮತ್ತೇನು ತಂದೆಯೋ?"

"ನಂದೇ ಒಂದಿಷ್ಟು ಬಟ್ಟೆ. ನೋಡಬೇಕಾ!" ಸುಮ್ಮನೆ ಕೇಳಿದಂತೆ ಮಾಡಿ, ತನ್ನ ರೂಮಿಗೆ ಒಯ್ದ. ಬೀರುವಿನ ಒಳಗೆ ಇಟ್ಟ.

ಮಾಲತಿಗೆ ಅವಳ ಭಾವೀ ಪತಿಯ ಮೂವತ್ತನೆಯ ಕಾಗದ ತಲಪುವ ಮೊದಲೇ ಅವನು ಬೆಂಗಳೂರಿಗೆ ವಾಪಸ್ಸಾಗಿದ್ದ. ಮದುವೆಗೆ ಇನ್ನು ಒಂದು ವಾರವಿದೆ ಎನ್ನುವ ಮೊದಲೇ ಅವನು ಬಂದಿಳಿದಿದ್ದ. ಇದ್ದಕ್ಕಿದ್ದಂತೆ ಎದುರಿಗೆ ಪ್ರತ್ಯಕ್ಷನಾದ ಅವನನ್ನು ಕಂಡು ಮಾಲತಿ ಆಶ್ಚರ್ಯ, ಸಂಭ್ರಮಗಳಿಂದ ಎದ್ದುನಿಂತಳು. ಭಾವೀ ಅಳಿಯನ ಸ್ವಾಗತ ಆದಾರಾಭಿಮಾನಗಳಿಂದ ಜರುಗಿತು. ಅವನು ಅವಳಿಗೆಂದು ತಂದಿದ್ದ ಬೆಂಗಾಲಿ ಸಿಲ್ಕ್‌ಸೀರೆ, ಅಸ್ಸಾಮಿ ಸೀರೆ, ಶಾಲುಗಳನ್ನು ಕೊಟ್ಟ. ಅವಳಿಗೆ ಸಂಕೋಚವೆನಿಸಿತು. ತಾನು ಅವನಿಗಾಗಿ ಏನನ್ನೂ ತಂದಿಲ್ಲವೆನ್ನುವುದು ನೆನಪಿಗೆ ಬಂತು.

ಆದರೆ ಮದುವೆಗೆ ಕೆಲವೇ ದಿನಗಳಿವೆ. ತನ್ನ ಬಳಿ ಹಣವಿಲ್ಲ. ಮತ್ತೆ ಮೋಹನನನ್ನು ಕೇಳಲು ಹಿಂಜರಿದಳು. ಒಂದುತರಹದ ಮೂಡ್‌ನಲ್ಲಿ ನಿಂತಿದ್ದವಳನ್ನು ಮನೋಹರನೇ ಸಮಾಧಾನ ಗೊಳಿಸಿದ. "ಈ ಎರಡರಲ್ಲಿ ಯಾವುದು ಇಷ್ಟವೋ ಅದನ್ನು ಉಟ್ಟುಕೊಂಡು, ಸಿದ್ಧವಾಗಿ ಬಾ. ಹೊರಗೆಲ್ಲಾದರೂ ತಿರುಗಾಡಿ ಮಾತನಾಡೋಣ"

ತಾಯಿಯ ಅಸಹನೆಯನ್ನು ಗುರುತಿಸಿಯೂ, ಮಾಲತಿ ಮನೋಹರನ ಜತೆ ಹೊರಟಳು. ಮನೋಹರ ಮರೆಯದೇ ಅವಳನ್ನು ಒಂದು ಸಿನಿಮಾಕ್ಕೆ ಕರೆದು ಕೊಂಡು ಹೋದ. ಆದರೆ ಸಿನಿಮಾವನ್ನು ನೋಡಿದ ಆನಂದಕ್ಕಿಂತ, ಅವಳು ಹೆಚ್ಚಾದ ಆನಂದದಲ್ಲಿ ತೇಲಿ ಹೋಗಿದ್ದಳು.

"ಊರಿನಿಂದ ಬಂದ ಮೇಲೆ, ಫಸ್ಟ್‌ವಿಸಿಟ್ ನಿನಗೇ. ಸ್ನೇಹಿತರಿಗೆ ಆಹ್ವಾನ ಪತ್ರಿಕೆ ಕೊಡಬೇಕು. ಮುಂದಿನ ಭೇಟಿ, ಮದುವೆ ಛತ್ರದಲ್ಲಿ" ಎಂದ ನಗುತ್ತಾ..... ಮಾಲತಿ ಅವನನ್ನೇ ಮಿಕಿ ಮಿಕಿ ನೋಡಿದಳು.

ಹೆಣ್ಣಿನ ಮನೆಯವರೆಲ್ಲಾ ಛತ್ರಕ್ಕೆ ಮದುವೆ ಮುಹೂರ್ತದ ದಿನ ಬೆಳಗ್ಗೆ ಬಂದು ಸೇರಿದರು. ಹತ್ತಿರದ ನೆಂಟರೆಲ್ಲ ಬರುವವರಿದ್ದರು. ಸಾಯಂಕಾಲದ ಹೊತ್ತಿಗೆ ವರನ ಕಡೆಯವರು ಬರಲು ಏರ್ಪಾಡು ಮಾಡಿದ್ದರು.

ಮಧುರ, ರಾಗಿಣಿ ಮುಂಚಿತವಾಗಿಯೇ ಬಂದರು. ಅವರ ತಂದೆತಾಯಿಗಳು

ಆಮೇಲೆ ಬರುವವರಿದ್ದರು. ಮಾಲತಿ, ಮದುವೆಗಾಗಿ ಖರೀದಿಸಿದ್ದ ಜವುಳಿ, ಒಡವೆ ಇತ್ಯಾದಿಗಳನ್ನು ಸ್ನೇಹಿತೆಗೆ ತೋರಿಸಿದಳು. ಆಗ ಇದ್ದಕ್ಕಿದ್ದಂತೆ ತಾನು ಇವರಿಬ್ಬರಿಗೆಂದು ತಂದಿದ್ದ ಉಡುಗೊರೆಯ ಚೀಲಗಳು ನೆನಪಿಗೆ ಬಂದವು. "ಹೋಗೇ ರಾಗಿಣಿ, ಮೋಹನನ್ನು ನಾನು ಕರೆದೆ ಅಂತ ಕರೆದುಕೊಂಡು ಬಾರೇ"

ಅವನು ಎಲ್ಲಿಯೂ ಕಾಣಲಿಲ್ಲ. ಹೊರಗೆ ಯಾವುದೋ ಕೆಲಸಕ್ಕೆಂದು ಹೋಗಿದ್ದ. ಮೋಹನ ಅವುಗಳನ್ನು ಮನೆಯಿಂದ ತಂದಿದ್ದಾನೋ ಇಲ್ಲವೋ ತಿಳಿಯಲಿಲ್ಲ.

ಮನೆಯ ಮಗನಾಗಿ, ಮುಖ್ಯವಾದ ಕೆಲಸಗಳ ಕಡೆ ಗಮನ ಕೊಡುತ್ತಿದ್ದವನಿಗೆ, ಸಮಯವೇ ಸಾಲದು. ಎರಡನೇ ಪಂಕ್ತಿಯ ಊಟಕ್ಕೆ ಅವನು ಕುಳಿತಾಗ ಮಾಲತಿ ತನ್ನ ಸೇಹಿತೆಯರೊಡನೆ ಕೂತು ಊಟ ಮುಗಿಸಿದ್ದಳು. ಮಧುರ, ರಾಗಿಣಿ ತಮ್ಮ ತಂದೆ ತಾಯಿಯರೊಡನೆ ಮನೆಗೆ ವಾಪಸ್ಸು ಹೊರಟರು. ಮೋಹನನಿಗೆ ಮಧುರಳ ಕಡೆ ಆಸಕ್ತಿಯಿಂದ ನೋಡಲು ಅವಕಾಶವೇ ಒದಗಿರಲಿಲ್ಲ.

ಅವನು ಮನೆಗೆ ಹೋಗಿ ಬರುವುದಾಗಿ ಹೊರಟಾಗ, ಭವಾನಮ್ಮ ಕೆಲವು ಸಾಮಾನುಗಳನ್ನು ಮನೆಯಿಂದ ತರಲು ಹೇಳಿದಳು. ಮಾಲತಿಯೂ ಮರೆಯದೇ ಉಡುಗೊರೆಯ ಚೀಲವನ್ನು ನೆನಪಿಸಿದಳು.

ವರನ ಕಡೆಯವರು ಬರುವ ಸಮಯ ಸನಿಹವಾಗುತ್ತಿದ್ದಂತೆಯೇ ಮಾಲತಿ ಭಾವನೆಗಳ ಕಡಲಲ್ಲಿ ಮುಳುಗಿ ಹೋಗಿದ್ದಳು. ತನ್ನ ಅನಿಸಿಕೆಗಳನ್ನು ಹೇಳಿಕೊಳ್ಳಲು ಮಧುರಳೂ ಇರಲಿಲ್ಲ. ರಾಗಿಣಿಯಾದರೂ ಇರಬಾರದಾಗಿತ್ತೇ ಅಂತನ್ನಿಸಿತ್ತು. ಬಂದಿದ್ದ ನೆಂಟರ ಮಾತುಕತೆ, ಪ್ರಶ್ನೋತ್ತರಗಳಲ್ಲಿ ಸೇರಿಕೊಂಡಿದ್ದರೂ, ಅವಳ ಧ್ಯಾನವೆಲ್ಲಾ ಎಲ್ಲೋ....

ಅಷ್ಟರಲ್ಲಿ ಮಧುರ, ರಾಗಿಣಿ ಇಬ್ಬರೂ ಬಂದುದನ್ನು ಗಮನಿಸಿದಳು.

"ನಿನಗೋಸ್ಕರವೇ ಕಾಯ್ತಿದ್ದೆ ಕಣೆ.... ಯಾವ ಸೀರೇನ ಉಟ್ಟುಕೋ ಬೇಕು ಅಂತಾನೇ ತಿಳೀತಿಲ್ಲ. ಸ್ವಲ್ಪ ಹೇಳ್ತೀಯಾ?"

"ಚೆನ್ನಾಗಿದ್ಧೆ. ನಿನ್ನ ಅಲಂಕಾರ, ಇನೂ ಮುಗಿದೇ ಇಲ್ಲವಾ! ಇನ್ನೂ ಸ್ವಲ್ಪ ಹೊತ್ತು ತಾಳು. ಮನೋಹರ ಬರ್ತಾರೆ. ಅವರನ್ನೇ ಕೇಳಿ ಅವರಿಗಿಷ್ಟವಾದ ಸೀರೆಯನ್ನೇ ಉಡೂವಂತೆ"

"ನಾಳೆಯಿಂದ ನಿನ್ನನ್ನು ಕೇಳಲ್ಲಮ್ಮ.... ಇವತ್ತೇ ಕಡೇ ದಿನ. ಪ್ಲೀಸ್

ಹೇಳೇ ಹೊತ್ತಾಗಿದೆ" ಸೂಟ್‌ಕೇಸಿನ ಸೀರೆಗಳನ್ನೆಲ್ಲ ಕಿತ್ತು ಹಾಕಿದಳು.

ಮನೋಹರ ತಂದಿದ್ದ ಅಸ್ಸಾಂ ಸಿಲ್ಕ್ ಸೀರೆಯನ್ನು ಆರಿಸಿದಳು.

"ಇದು ನಿನಗೆ ಒಪ್ಪುತ್ತೆ. ಉಟ್ಟುಕೋ....."

ಆಗ ಅವಳಿಗೆ ಮಧುರ ಉಟ್ಟಿದ್ದ ಸೀರೆಯ ಮೇಲೆ ಗಮನ ಹರಿಯಿತು. ಮೋಹನ ಆ ಸೀರೆ ತಂದಿದ್ದರೆ, ಇವಳಿಗೆ ಉಡಲು ಕೊಡಬಹುದಾಗಿತ್ತೆನಿಸಿತ್ತು. ಆದರೆ ಅವನಿನ್ನು ಮನೆಯಿಂದ ಬಂದಿರಲೇ ಇಲ್ಲ.

"ಪ್ಲೀಸ್, ಏನೂ ತಿಳಿದುಕೊಳ್ಳಬೇಡ, ನನ್ನ ಸೀರೇಲಿ ಯಾವುದಾದರೂ ನಿಗಗಿಷ್ಟವಾದ ಸೀರೇನ ಉಟ್ಕೋತೀಯಾ? ಈ ರವಿಕೆಗೆ ಮ್ಯಾಚ್ ಆಗುವಂಥಾದ್ದು"

"ಬೇಡಮ್ಮ..... ನನಗೆ ಅದೆಲ್ಲ ಸರಿ ಹೋಗಲ್ಲ. ಈ ಸೀರೆ ಏನಾಗಿದೆ?"

ಅಲ್ಲಾ ಇವತ್ತು ನಿನ್ನ ದಿನ, ನನ್ನ ಡ್ರೆಸ್ ಹೇಗಿದ್ದರೇನು?

"ಯಾರಾದರೂ ಹುಡುಗ ನಿನ್ನನ್ನು ಮೆಚ್ಚಿ, ನಿನಗೆ ಬೇಗ ಮದುವೆಯಾಗುವಂತಾಗಲಿ ಅಂತ ನನ್ನ ಆಸೆ."

"ಆ ಆಸೆ ನನಗಿಲ್ಲ. ಯಾವ, ಎಂತಹ ಸ್ಫುರದ್ರೂಪಿ, ಶ್ರೀಮಂತ ಗಂಡೂ ನನ್ನನ್ನು ಆಕರ್ಷಿಸಲಾರ"

"ಆಮ್ರಪಾಲಿಯ ವೈಜಯಂತಿಮಾಲಳ ತರಹ ಆಡಬೇಡ. ನೀನು ಜೋಗಿನಿ ಅಲ್ಲ. ವಿರಾಗಿ ಅಲ್ಲ. ಮುದುಕಿಯಂತೂ ಅಲ್ಲವೇ ಅಲ್ಲ"

"ನನಗಿಷ್ಟವಿಲ್ಲದ ವಿಷಯದ ಬಗ್ಗೆ ಬಲವಂತ ಮಾಡಬೇಡ"

"ನಾನೂ ಹೊರಟುಹೋದ ಮೇಲೆ, ನಿನಗೆ ಅಡ್ವೈಸ್ ಮಾಡುವವರು ಯಾರೂ ಇರುವುದಿಲ್ಲ. ಹಾಳಾಗಿ ಹೋಗ್ತೀಯಾ ಅಷ್ಟೇ...." ಮಾಲತಿ ಆತ್ಮೀಯತೆಯಿಂದ ಬೈದಳು. ಮಧುರ ನಕ್ಕಾಗ, ಸ್ನೇಹಿತೆಯ ಬೆನ್ನಿಗೆ ಗುದ್ದಿ.

"ನಾನು ಏನೇ ಅಂದ್ರು ನಗ್ತೀಯಲ್ಲ"

"ನಕ್ಕು ಬಿಟ್ಟರೆ ಯಾವ ತಾಪತ್ರಯವೂ ಇರುವುದಿಲ್ಲ...."

"ನಿನ್ನಂತಹವಳನ್ನು ಹೆಂಡತಿಯನ್ನಾಗಿ ಪಡೆಯುವವನು ನಿಜವಾಗಿಯೂ ಅದೃಷ್ಟವಂತ ಕಣೇ.... ನನ್ನನ್ನು ಒಪ್ಪುವ ಮೊದಲು, ಮನೋಹರ ನಿನ್ನನ್ನೇನಾದರೂ ನೋಡಿ ಮಾತನಾಡಿಸಿದಿದ್ದರೆ, ಇವತ್ತು ಮಧುಮಗಳು ನೀನಾಗಿರುತ್ತಿದ್ದೆ"

"ಸಾಕು. ಈ ಅಸಂಬದ್ಧದ ಮಾತು"

"ನಿಂಗೊತ್ತಾ? ಅವತ್ತು ಮನೋಹರ ನನ್ನನ್ನು ನೋಡಲು ಬರುವ ದಿನ, ನೀನು ಅವನ ಎದುರಿಗೆ ಬರದಂತೆ ಇರಲು, ನಮ್ಮಮ್ಮತಡೆ

ಹಾಕಿದ್ದಳು"

"ನಂಗೊತ್ತು"

"ಹೌದೇನೇ..... ನೀನು ಹೇಳಲೇ ಇಲ್ಲ. ಹೇಗೆ ಗೊತ್ತಾಯ್ತು?"

"ಇದು ಯಾವ ತಾಯಿಯಾದರೂ ಮಾಡುವ ಕೆಲಸವೇ..... ಮಗಳನ್ನು ನೋಡಲು ಬರುವವನ ಎದುರಿಗೆ ಅವಳ ಸ್ನೇಹಿತೆಯನ್ನು ಯಾವ ಮೂರ್ಖರೂ ಕೂರಿಸುವುದಿಲ್ಲ..... ನೀನು ಕರೆದರೂ ನಾನು ಬರಲಿಲ್ಲ ಅವತ್ತು ಅದಕ್ಕೇ"

"ಆದರೆ ಈ ಸಂದಿಗ್ಧ, ನಿನ್ನ ಮದುವೆ ಸಮಯದಲ್ಲಿ ನನಗೆ ಒದಗುವುದಿಲ್ಲ. ಏಕೆ ಗೊತ್ತಾ!"

"ಏಕೆ ಅಂದ್ರೆ, ನಿನಗೆ ಮದುವೆ ಆಗಿರುತ್ತಲ್ಲ. ಆ ವರ ನಿನ್ನನ್ನು ಮೆಚ್ಚಲು ಹೇಗೆ ಸಾಧ್ಯ!"

"ಅಲ್ಲ ಖಂಡಿತಾ ಅಲ್ಲ. ಅದಕ್ಕೆ ಬೇರೆ ಕಾರಣವಿದೆ"

ಅಷ್ಟರಲ್ಲಿ ಮೋಹನ ಅಲ್ಲಿಗೆ ಬಂದುದರಿಂದ ಮಾತು ನಿಂತಿತು. ಮೋಹನ ಅವಳಕಡೆ ನೋಡಿ ಮುಗುಳ್ನಕ್ಕ. ಅವನ ನೋಟದಲ್ಲಿ ಮೆಚ್ಚುಗೆ ಇದ್ದುದನ್ನು ಗಮನಿಸಿದಳು. ಅವರಿಬ್ಬರನ್ನೇ ಒಂದೆರಡುಸಲ ನೋಡಿದ ಮಾಲತಿ, ತಾನೇ ಏನೋ ಅರ್ಥಮಾಡಿಕೊಂಡಳು.

"ನಿನಗೆ ಅವತ್ತು ಕೊಟ್ಟಿದ್ನಲ್ಲ..... ಅದನ್ನು ತಂದೆಯಾ?"

"ಇಲ್ಲ ಮನೇಲೇ ಇದೆ."

"ಯಾಕೋ? ನಾಳೆ ದಿನವಾದರೂ ತಗೊಂಡು ಬರ್ತೀಯಾ?"

"ಈಗ ಬೇಡ. ನಿಧಾನವಾಗಿ ಕೊಟ್ಟರಾಯ್ತು. ಅವಾಂತರವೇನು!"

ಎಂದ ಮಧುರಳ ಕಡೆ ತಿರುಗಿ, ಅಣ್ಣತಂಗಿಯರ ಸಂವಾದ ಅವಳಿಗೆ ಅರ್ಥವಾಗಿರಲಿಲ್ಲ.

"ನಾಳೆಯೇ ಆದರೆ, ನಾನೇ ಕೊಡಬಹುದಾಗಿತ್ತು. ಆಮೇಲಾದರೆ ನೀನು ಕೊಡಬೇಕಾಗುತ್ತದೆ"

"ಕೊಡ್ತೀನಿ ಅದಕ್ಕೇನಂತೆ?" ಎಂದು ಅವನೆಂದಾಗ ಆಂ... !ಎಂದಳು. ಅವನ ಮಾತಿನ ಅರ್ಥ ತಕ್ಷಣಕ್ಕೆ ತಿಳಿಯಲಿಲ್ಲ.

"ರಾಗಿಣಿ ಎಲ್ಲಿ?" ಬೇಕಂತ ಕೇಳಿದ.

ಯಾರನ್ನೋ ಸ್ನೇಹಿತರನ್ನಾಗಿ ಮಾಡಿಕೊಂಡು ಹರಟೆ ಹೊಡೀತಿರ್ತಾಳೆ ಉತ್ತರ ಕೊಟ್ಟಿದ್ದು ಮಾಲತಿ. ಅವನು ಕೇಳದ್ದು ಮಧುರಳನ್ನು. ಅವಳು ಬರಿದೇ ನಕ್ಕಳು.

"ಬಂದ್ರು.... ಬಂದ್ರು...." ಎನ್ನುವ ಕೂಗಿನೊಂದಿಗೆ, ಮೇಳದ ಧ್ವನಿಯೂ ಸೇರಿದಾಗ, ವರನ ಕಡೆಯವರು ಬಂದರು ಎಂದು ಎಲ್ಲರೂ ತರಾತುರಿಯಿಂದ ಛತ್ರದ ಮುಂಬಾಗಿಲ ಕಡೆ ಹೊರಟರು.

ಮುಂದೆ ಅಡಿಯಿಟ್ಟ ಮಾಲತಿಯನ್ನು ಹಿಡಿದ ನಿಲ್ಲಿಸಿದ.

"ನೀನೆಲ್ಲಿಗೆ ಹೊರಟೆ? ಇಲ್ಲೇ ಇರು. ನಿನ್ನ ಸ್ನೇಹಿತೇನೂ ಇಲ್ಲೇ ಇರಲಿ" ಮೋಹನ ನುಡಿದಾಗ ಮಾಲತಿ ಪೆಚ್ಚಾದಳು.

ವರನ ಸ್ನೇಹಿತರ ಎದುರಿಗೆ, ಮಧುರ ಪ್ರದರ್ಶನದ ವಸ್ತುವಾಗುವುದು ಅವನಿಗೆ ಇಷ್ಟವಿರಲಿಲ್ಲವಾದ್ದರಿಂದ, ಅವಳೂ ಅಲ್ಲೇ ಇರಲಿ ಎಂದು ಹೇಳಿದ್ದ. ಅದು ಇಬ್ಬರಿಗೂ ತಿಳಿಯಲಿಲ್ಲ.

"ನೋಡೇ ಹೇಗಾಡ್ತಾನೆ! ನಾನಂತೂ ಸರಿ..... ನೀನೂ ಏಕೆ ಹೋಗಬಾರದು"

"ಪರವಾಗಿಲ್ಲ ಬಿಡೇ. ನಾನು ನಿನ್ನ ಜತೇಲಿರ್ತೀನಿ"

ಕೆಂದಾರತಿಯೆತ್ತಿ ವರನನ್ನು ಬರಮಾಡಿಕೊಂಡರು. ಮನೋಹರನ ಕಣ್ಣುಗಳು ಮಾಲತಿಯನ್ನು ಅರಸಿದರೆ, ಅವನ ಸ್ನೇಹಿತ ಕೇಶವನ ಕಣ್ಣುಗಳು ಮಧುರಳನ್ನು ಹುಡುಕಿದವು. ಅವನನ್ನು ಕಂಡು, ಮೋಹನ ಹಲ್ಲುಕಡಿದ. ಮಧುರ ರೂಮಿನಿಂದ ಹೊರಗೆ ಬಂದಿಲ್ಲವೆನ್ನುವುದನ್ನು ತಿಳಿದು ಸಮಾಧಾನಗೊಂಡ.

ಕೇಶವ ರಾಗಿಣಿಯೊಡನೆ ಏನನ್ನೋ ಕೇಳುತ್ತಿದ್ದಾನೆಂದೆನಿಸಿ, ಸುಮ್ಸುಮ್ಮೆ ರಾಗಿಣಿಯನ್ನು ಕರೆದು ಅವಳಿಗೆ ಬೇರೆ ಕೆಲಸ ಹಚ್ಚಿದ.

ಮನೋಹರ, ಮೋಹನನಿಗೆ ಹೇಳಿದ.

"ನಿಮ್ಮ ಸಿಸ್ಟರ್‌ನ ಕಳಿಸಿ. ನನ್ನ ಸ್ನೇಹಿತರಿಗೆ ಪರಿಚಯ ಮಾಡಿಸಿಕೊಡಬೇಕು"

ಮೋಹನ ರೂಮಿಗೆ ಬಂದಾಗ, ಕುಳಿತಿದ್ದವರು ಎದ್ದುನಿಂತರು.

"ಮಾಲತಿ, ಮನೋಹರ ನಿನಗೆ ಹೇಳಿಕಳಿಸಿದ್ದಾರೆ. ಹೋಗಿ ಮಾತನಾಡಿಸಿ ಕೊಂಡು ಬಾ....."

"ನನಗಾ! ಏಕಂತೆ!"

"ನನಗೇನು ಗೊತ್ತು!" ಎಂದು ಸಿಡುಕುವ ಮನಸ್ಸಾದರೂ, ಸಹನೆಯಿಂದ, "ಸ್ನೇಹಿತರಿಗೆ ನಿನ್ನನ್ನು ಪರಿಚಯಿಸಿಕೊಡ್ತಾರಂತೆ. ಕಾಯ್ತಾಇದ್ದಾರೆ. ಹೋಗು"

"ಬಾರೇ..... ಮಧುರ..... ಮಾಲತಿ ಸ್ನೇಹಿತೆಯಕೈ ಹಿಡಿದೆಳೆದಳು."

"ಅವಳೇಕೆ! ನೀನು ಒಬ್ಬಳೇ ಹೋಗು" ರೇಗಿದ್ದ ವಿನಾಕಾರಣವಾಗಿ.

"ಯಾಕೋ ಹೀಗೆ ರೇಗ್ತೀಯಾ?"

"ಮತ್ತೆ.... ಆ ಸ್ನೇಹಿತರಿಗೆ ಇವಳನ್ನೇನು ಪರಿಚಯ ಮಾಡಿಕೊಡಬೇಕಾಗಿಲ್ಲ

ವಲ್ಲ”

“ಒಬ್ಬಳೇ ಹೋಗಲಾ? ಹಾಗಾದರೆ.....

“ರಾಗೀಣೀನ ಕರೆದುಕೊಂಡು ಹೋಗು. ತಡೀ ಅವಳನ್ನು ಕಳಿಸ್ತೀನಿ” ಅವನು ಹೊರಗೆ ನಡೆದಾಗ ಸ್ನೇಹಿತೆಯರಿಬ್ಬರು ಮುಖಮುಖ ನೋಡಿಕೊಂಡರು.

ವರನ ಕಡೆಯವರಿಗೆ ಕಾಫಿ ತಿಂಡಿಗಳ ಉಪಚಾರ ಪ್ರಾರಂಭವಾಯಿತು. ಮಾಲತಿ, ಮನೋಹರನ ಪಕ್ಕದಲ್ಲಿ ಕೂತು ಮಾತನಾಡುತ್ತಿದ್ದುದನ್ನು ಗಮನಿಸಿದ. ಅವಳ ಬಳಿ ರಾಗಿಣಿಯೂ ಇರಲಿಲ್ಲ. ಕೇಶವ ಅತ್ತಿತ್ತ ನೋಡುತ್ತಿದ್ದ. ಅಷ್ಟರಲ್ಲಿ ಒಬ್ಬ ಹುಡುಗ ಮೋಹನನನ್ನು ಹುಡುಕಿಕೊಂಡು ಬಂದ.

“ನೀವು ಮೋಹನ ತಾನೇ?”

“ಹೌದು. ನೀನು?” ಪ್ರಶ್ನಿಸಿದ.

“ನಾನು ರಾಗಿಣಿಯ ಪಕ್ಕದ ಮನೆಯವನು... ಇಲ್ಲಿಗೆ ಅಂತ ಹೊರಟಿದ್ದ ಅವರ ತಂದೆ ತಾಯಿಗೆ ಆಕ್ಸಿಡೆಂಟ್ ಆಗಿ, ನರ್ಸಿಂಗ್ ಹೋಂ ನಲ್ಲಿದ್ದಾರೆ. ಮಧುರಳನ್ನು ರಾಗಿಣೀನೂ ಕಳಿಸಬೇಕಂತೆ”

ಆ ಹುಡುಗ ಸುಲಭವಾಗಿ ಹೇಳಿದರೂ, ಅದನ್ನು ನಂಬಲು ಕೆಲವು ನಿಮಿಷಗಳು ಹಿಡಿದವು. ಮತ್ತೊಮ್ಮೆ ಕೇಳಿ ತಿಳಿದುಕೊಂಡ.

“ನೀನು ಹೋಗು, ನಾನು ಕರೆದುಕೊಂಡು ಬರ್ತೀನಿ” ಎಂದು ಆ ಹುಡುಗನನ್ನ ಕಳಿಸಿ, ಒಂದು ಘಳಿಗೆ ನಿಂತಲ್ಲೇ ಯೋಚಿಸಿದ.

ಈಗ ಅವಳಿಗೆ, ತಿಳಿದರೆ, ತಕ್ಷಣ ಮದುವೆ ಮನೆಯಿಂದ ಹೊರಟುಬಿಡ್ತಾಳೆ. ತಿಳಿಸದಿರುವುದೂ ಸರಿಯಲ್ಲ. ನನ್ನನ್ನೇ ಎಲ್ಲರೂ ದೂಷಿಸುತ್ತಾರೆ. ಅವಳು ಹೋಗಬೇಕಾದದ್ದೇ, ಎಷ್ಟಾಗಲೀ ಅವರು ಅವಳ ತಂದೆ ತಾಯಿ, ಆದರೆ ಅವಳು ಇಲ್ಲಿಂದ ಹೊರಟುಹೋದರೆ ಮದುವೆ ಮನೆಯ ಕಳೆಯೇ ಹೊರಟುಹೋದಂತಾಗುತ್ತದೆ. ಇದ್ದಕ್ಕಿದ್ದಂತೆ ಅವನು ಕೇಶವನನ್ನು ಗಮನಿಸಿದ. ರೂಮಿನ ಬಾಗಿಲಿನಲ್ಲಿ ನಿಂತಿದ್ದ, ಮಧುರಳನ್ನೇ ಹದ್ದಿನಂತೆ ನೋಡುತ್ತಿದ್ದವನನ್ನು ಕಂಡು ರೇಗಿತು. ದುಡುದುಡನೆ ಅವಳು ನಿಂತಿದ್ದ ಕಡೆಗೆ ಧಾವಿಸಿದ. ಅವಳು ಜಾಗ ಬಿಟ್ಟಳು. ಅವಳನ್ನು ತಳ್ಳಿದಂತೆಯೇ ರೂಮಿನೊಳಗೆ ಬಂದು, “ಇಲ್ಲಿ ಸ್ವಲ್ಪ ಬನ್ನಿ” ಎಂದ.

ಅವನ ಗಾಭರಿಯ ಮುಖ ಕಂಡು, ಸಾಂತ್ವನದ ಧ್ವನಿಯಲ್ಲಿ ನುಡಿದ.

“ಗಾಭರಿ ಪಡಬೇಡಿ.... ನಿಮ್ಮ ತಂದೆಗೆ ಆಕ್ಸಿಡೆಂಟ್ ಆಗಿದೆಯಂತೆ.... ಈಗಲೇ ನರ್ಸಿಂಗ್ ಹೋಂಗೆ ಹೋಗಬೇಕಾಗುತ್ತೆ.....”

ನಿಂತಿದ್ದವಳು, ಗೋಡೆಯ ಆಸರೆಯನ್ನು ಪಡೆದಳು.

"ನಿಮ್ಮ ಪಕ್ಕದ ಮನೆ ಹುಡುಗ ಬಂದಿದ್ದ. ಹೆಚ್ಚಿಗೆ ಏನೂ ಪೆಟ್ಟಾಗಿಲ್ಲ ಎಂದ. ಬನ್ನಿ. ನಾನು ನಿಮ್ಮಿಬ್ಬರನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗ್ತೀನಿ"

"ರಾಗಿಣಿ ಇಲ್ಲೇ ಇರಲಿ. ಅವಳಿನ್ನು ಚಿಕ್ಕವಳು. ಹೆದರ್ತಾಳೆ. ನಾನು ಒಬ್ಬಳೇ ಹೋಗ್ತೀನಿ. ಯಾವ ಆಸ್ಪತ್ರೆ!" ಧೈರ್ಯತಂದುಕೊಂಡ ಅವಳು ಕೇಳಿದಾಗ ಅವನಿಗೆ ಅಯ್ಯೋ ಎನಿಸಿತ್ತು. ಅವಳನ್ನು ತಬ್ಬಿ ಸಮಾಧಾನ ಹೇಳುವಂತಿದ್ದರೇ ಎಂದುಕೊಂಡ ಮೋಹನ. "ನಾನು ನಿಮ್ಮನ್ನು ಬಿಟ್ಟು ಬರ್ತೀನಿ..... ಮೊದಲು ಈ ರೂಮಿಗೆ ಬೀಗ ಹಾಕಿ. ಅದನ್ನು ಅಮ್ಮನ ಕೈಗೆ ಕೊಟ್ಟು ಬರ್ತೀನಿ"

ಮಧುರ ಆಚೆ ಬಂದಳು. ಮೋಹನ ರೂಮಿಗೆ ಬೀಗ ಹಾಕಿ, ತಾಯಿಯನ್ನರಸಿ ನಡೆದ. ಸಂಕ್ಷಿಪ್ತವಾಗಿ ತಾಯಿಗೆ ವಿಷಯ ತಿಳಿಸಿದ. ಆಕೆಗೆ ಅಸಹನೆ ಹೆಚ್ಚಿತ್ತು. "ಈಗ ನೀನೇ ಹೋಗಬೇಕೆ? ಬೇರೇ ಯಾರೂ ಇಲ್ಲವೆ?"

'ಬೇಗ ಬಂದುಬಿಡ್ತೀನಿ' ಎಂದು ಉತ್ತರಿಸಿ ಹೊರಟ. ಇಬ್ಬರೂ ಜತೆಯಾಗಿ ಹೊರಗೆ ಹೋದುದನ್ನು ಅನೇಕ ಜೋಡಿ ಕಣ್ಣುಗಳು ನೋಡಿದವು. ಕೇಶವನ ಕಣ್ಣುಗಳಲ್ಲಿ ಅನುಮಾನ ಮೂಡಿದ್ದನ್ನು ಯಾರೂ ಗಮನಿಸಲಿಲ್ಲ.

ಮೋಹನ ಸ್ಕೂಟರನ್ನು ಸ್ಟಾರ್ಟ್‌ಮಾಡಿ, 'ಹತ್ತಿ' ಎಂದಾಗ ಅವಳು ಹಿಂಜರಿದಳು. ಅವನು ವಿಚಿತ್ರವಾಗಿ ಅವಳನ್ನೇ ನೋಡಿದಾಗ, ಹೆದರಿ, ಹತ್ತಿ ಕುಳಿತಳು.

ಮುಂದಿನ ಕೆಲವೇ ನಿಮಿಷಗಳಲ್ಲಿ ಇಬ್ಬರೂ ನರ್ಸಿಂಗ್‌ಹೋಂನ ಎಮರ್ಜೆನ್ಸಿ ವಾರ್ಡಿನಲ್ಲಿದ್ದರು. ದುಗುಡವನ್ನು ಹತ್ತಿಕ್ಕಿ ಮಧುರ ಒಳಗೆ ಬಂದಳು. ಅವಳ ಹಿಂದೆ ಮೋಹನ ಬಂದ.

ದೂರದಿಂದ ಮಲಗಿದ್ದ ತಂದೆಯ ಕಡೆ ನೋಡಿದಳು. ರೂಮಿನ ಹೊರಗೆ ಇದ್ದ ಬೆಂಚಿನ ಮೇಲೆ ಕುಳಿತಿದ್ದ ತಾಯಿಯನ್ನು ನೋಡಿ.... ಗಾಭರಿಯಿಂದ ಧಾವಿಸಿ,

"ಏನಾಯ್ತಮ್ಮ?" ಕೇಳಿದಳು.

"ಆಟೋದಲ್ಲಿ ಬರುತ್ತಿದ್ದೆವು. ನೋಡು ಹೀಗಾಯ್ತು. ಅವರಿಗೆ ಜ್ಞಾನವೇ ಇಲ್ಲ" ತಾಯಿ ಅಳುವಿನ ಧ್ವನಿಯಲ್ಲಿ ನುಡಿದಾಗ, ಮಧುರ ಮೋಹನ ಕಡೆ ನೋಡಿದಳು. ಮೋಹನ ರೂಮಿನಿಂದ ಹೊರಗೆ ಬಂದ. ಡ್ಯೂಟಿ ಡಾಕ್ಟರನ್ನು ಹಿಂಬಾಲಿಸಿ ವಿಷಯ ತಿಳಿದುಕೊಂಡ.

"ಏನೂ ಗಾಭರಿ ಇಲ್ಲ ಎಂದಿದ್ದಾರೆ. ರಾತ್ರಿಯ ಹೊತ್ತಿಗೆ ಜ್ಞಾನ ಬರುತ್ತೆ ಅಂದರು. ಎಕ್ಸ್‌ರೇ ಎಲ್ಲಾ ತೆಗೆದಿದ್ದಾರಂತೆ. ರಿಪೋರ್ಟ್ ನೋಡಿ, ಆಮೇಲೆ ಏನು ಮಾಡಬೇಕು ಅಂತ ತಿಳಿಸ್ತಾರೆ" ಎಂದ ಮಧುರಳ ಬಳಿ ನಿಂತು.

ಅವಳು ತಾಯಿಯ ಕಡೆ ನೋಡಿದಳು. ಆಕೆ ದಿಗ್ಭ್ರಮೆ ಹಿಡಿದವಳಂತೆ ಕೂತೇ ಇದ್ದಳು. ಅವಳು ಪೆಚ್ಚಾಗಿ ಮೋಹನನ ಕಡೆ ನೋಡಿದಳು. ಸಂಜ್ಞೆಯಿಂದ ಅವಳನ್ನು ಒಂದು ಬದಿಗೆ ಕರೆದು, ಅವಳ ಕೈಗೆ ಒಂದಿಷ್ಟು ನೋಟುಗಳನ್ನು ಇಟ್ಟ.

"ಈ ಹಣಾನ ಇಟ್ಕೊಂಡಿರಿ. ಬೇಕಾಗುತ್ತೆ. ನನ್ನ ಸಹಾಯ ಬೇಕಿದ್ದರೆ, ಈ ನಂಬರಿಗೆ ಫೋನು ಮಾಡಿ, ತಕ್ಷಣ ಬರ್ತೀನಿ" ಛತ್ರದ ಫೋನಿನ ನಂಬರನ್ನು ಬರೆದುಕೊಟ್ಟ.

"ನಿಮ್ಮ ತಾಯಿಗೆ ಷಾಕ್ ಆಗಿದೆ ಅಷ್ಟೇ.... ನೀವು ಅವರ ಜತೆಯಲ್ಲೇ ಇರಿ. ನಾನು ಮತ್ತೆ ಬರುವಾಗ ರಾಗಿಣೀನೂ ಕರೆದುಕೊಂಡು ಬರ್ತೀನಿ"

"ಸುಮ್ಮನೆ ನಿಮಗೆಲ್ಲ ತೊಂದರೆ"

"ತೊಂದರೆ ಏನಿಲ್ಲ...... ನಮ್ಮ ಮನೇದೇ. ಮದುವೆಯಾಗುವ ಹೊತ್ತಿಗೆ ನಾನೀಗ ಛತ್ರಕ್ಕೆ ಹೋಗಲೇಬೇಕಾಗಿದೆ. ಇಲ್ಲದಿದ್ದರೆ ನಾನು ಇಲ್ಲೇ ನಿಮ್ಮ ಜತೇನೇ ಇರ್ತಿದ್ದೆ"

"ಪರವಾಗಿಲ್ಲ ನೀವು ಹೋಗಿಬನ್ನಿ. ನಿಮ್ಮ ಅಗತ್ಯ ಅಲ್ಲಿಯೂ ಇದೆ"

"ಹಾಗಾದ್ರೆ ಬರಲಾ?" ಎಂದು ಕೇಳಿ, ಮತ್ತೊಮ್ಮೆ ಸೂಚನೆಗಳನ್ನು ನೀಡಿ, ಕೂತಿದ್ದ ಅವಳ ತಾಯಿಯ ಬಳಿ ಹೋಗಿ, ಅವರಿಗೂ ಸಮಾಧಾನದ ಒಂದೆರಡು ನುಡಿಗಳನ್ನು ಹೇಳಿ, ಮಧುರಳ ಕಡೆ ತಲೆಯಾಡಿಸಿ ಹೊರಟಾಗ, ಅವಳ ಕಣ್ಣುಗಳು ಕೃತಜ್ಞತೆಯನ್ನು ಸೂಚಿಸಿದವು.

ಆಸ್ಪತ್ರೆಯ ಕಾರಿಡಾರಿನಲ್ಲಿ ಏಕಾಂಗಿಯಾಗಿ ಅವಳನ್ನು ಬಿಟ್ಟು ಹೋಗುವ ಮನಸ್ಸಿನಲ್ಲದೇ ನಡೆದ. ಅವನ ಮನಸ್ಸೂ ಅಲ್ಲೋಲ ಕಲ್ಲೋಲಗೊಂಡಿತ್ತು.

ಅವನು ಛತ್ರಕ್ಕೆ ವಾಪಸ್ಸಾದಾಗ, ಕೆಲವರು ಅವನಿಗಾಗಿಯೇ ಕಾಯುತ್ತಿರುವಂತೆ ಕಂಡಿತು. ರಾಗಿಣಿ ಅವನ ಬಳಿಗೆ ಓಡಿ ಬಂದಳು.

"ಅಕ್ಕ ಎಲ್ಲಿ"

"ಮನೆಗೆ ಹೋಗಿದ್ದಾಳೆ. ಏಕೆ?"

"ಕೇಶವ ಅನ್ನೋರು, ಅಕ್ಕನ ಬಗ್ಗೆ ಏನೇನೋ ಕೇಳಿದ್ರು ನನಗೆ ಹೆದರಿಕೆ ಆಯ್ತು"

"ಏನಂತ ಕೇಳಿದ?"

"ಅಕ್ಕನಿಗೆ ಮದುವೆ ಆಗಿದ್ಯಾ! ಮೋಹನನ ಜತೇಲಿ ಎಲ್ಲಿಗೆ ಹೋದಳು ಅಂತ?"

"ಅಷ್ಟೇ ತಾನೇ. ನೀನೇನು ಹೇಳಿದೆ? ಅದಕ್ಕೆ ಹೆದರಿಕೆ ಏಕೆ!"

"ಅಕ್ಕ ಎಲ್ಲೂ ಕಾಣಲಿಲ್ಲವಲ್ಲ"

"ನಿನ್ನ ತಂದೆ ತಾಯಿಯರ ಜತೆ ಮತ್ತೆ ಬರ್ತಾಳೆ. ಹೆದರಿಕೆ ಏಕೆ? ನಾವೆಲ್ಲಾ ಇಲ್ಲವಾ! ನೀನು ನನ್ನ ಜೆತೆ ಜತೆಯಲ್ಲೇ ಇರು. ಕೇಶವ ಕರೆದರೂ ಹೋಗಬೇಡ"

"ನನ್ನನ್ನು ಇನ್ನು ಏನೆನೋ ಕೇಳಿದ್ರು......"

"ಏನು ಕೇಳಿದ ಎಂದು ಕೇಳುವ ಮನಸ್ಸಾಗಲಿಲ್ಲ. 'ಹಲ್ಕಾ' ಎಂದು ಹಲ್ಲು ಕಡಿದ. ರಾಗಿಣಿ ಚಿಕ್ಕ ಹುಡುಗಿಯಲ್ಲ. ಅವಳ ಜತೆ ಅಸಭ್ಯವಾಗಿ ನಡೆದು ಕೊಂಡಿರಬಹುದೆನೋ ಎಂದುಕೊಂಡಾಗ ಅಸಹ್ಯವೆನಿಸಿತ್ತು. ಆ ಕ್ಷಣದಲ್ಲಿ ಸಧ್ಯ, ಮಧುರ ಯಾವುದೋ ನೆವದಲ್ಲಿ ಆವನ ಕಣ್ಣೆದುರಿಗೆ ಇಲ್ಲದಿರುವುದೇ ಒಳ್ಳೆಯದಾಯ್ತು ಎಂದುಕೊಂಡ."

ಆ ನಂತರದ ಯಾವ ಕಾರ್ಯಕಲಾಪಗಳ ಕಡೆ ಮೋಹನ ಆಸಕ್ತಿ ತೋರಲಿಲ್ಲ. ತನ್ನ ಕರ್ತವ್ಯವೆಂಬಂತೆ ನಿರ್ವಹಿಸಿದ. ಆಗಾಗ್ಗೆ. ಆಸ್ಪತ್ರೆಯ ಕಾರಿಡಾರಿನಲ್ಲಿ ಅಸಹಾಯಕಳಂತೆ ಚಡಪಡಿಸುತ್ತಿರುವ ಮಧುರಳ ಮುಖ ಆವನ ಮುಂದೆ ಬಂದು ಬಂದು ನಿಲ್ಲುತ್ತಿತ್ತು. ತಾನೀಗ ಅವಳ ಬಳಿಯಲ್ಲಿ ಇರುವಂತಿದ್ದರೇ..... ಎಂದು ಎಷ್ಟೋ ಸಲ ಹೇಳಿಕೊಂಡ

ಅನ್ಯಮನಸ್ಕನಂತೆ, ತನ್ನಿಂದ ದೂರದೂರವೇ ಇದ್ದ ಅಣ್ಣನನ್ನು ಮಾಲತಿ ಗಮನಿಸಿದಳು. ನಾಳೆ ಮದುವೆಯಾಗಿ ಹೊರಟುಹೋಗ್ತಿದೀನಿ ಅಂತ ವ್ಯಸನವೇನೋ ಎಂದುಕೊಂಡಾಗ ಅವಳೂ ಮಂಕಾದಳು. ಎಷ್ಟೋ ಹೊತ್ತಿನ ತನಕ ಅವಳಿಗೆ ಮಧುರಳು ಛತ್ರದಲ್ಲಿಲ್ಲ ಎನ್ನುವುದು ತಿಳಿದೇ ಇರಲಿಲ್ಲ. ರೂಮಿನಲ್ಲಿರಬಹುದು ಎಂದುಕೊಂಡಿದ್ದಳು.

ರೂಮಿಗೆ ಸೀರೆ ಬದಲಾಯಿಸಲು ಬಂದಾಗ ಅವಳು ಕಾಣದಿದ್ದಾಗ, ರಾಗಿಣಿಯನ್ನು ಕೇಳಿದಳು.

"ಮನೆಗೆ ಹೋಗಿದಾಳೆ. ಅಪ್ಪ ಅಮ್ಮನ ಜತೆ ಬರ್ತಾಳೆ" ಎಂದಾಗ, ಏಕೆ ಹೋಗಿರಬಹುದು ಎಂದು ಚಿಂತಿಸಿ, ಉತ್ತರ ತಿಳಿದುಕೊಳ್ಳಲು ಅವಳ ಬಳಿ ಸಮಯವಿರಲಿಲ್ಲ. ಮತ್ತೆ ಹಸೆಮಣೆಯ ಬಳಿ ಹೋಗಬೇಕಾಗಿತ್ತು.

ರಾಗಿಣಿ ಮನೋಹರನ ಹಿಂದೆಯೇ ಸುತ್ತುತ್ತಿದ್ದುದನ್ನು ಗಮನಿಸಿ ನಗು ಬಂದಿತ್ತು. ಮೂರನೇ ಹೆಂಡತಿ ಎಂಬ ಜೋಕ್ ಸಹ ನೆನಪಿಗೆ ಬಂತು.

ಊಟದ ವೇಳೆಯಾದರೂ, ತನ್ನ ಸ್ನೇಹಿತೆ ಬರದಿದ್ದಾಗ, ಅವಳಿಗೆ ಏನೋ ಆತಂಕ ಶುರುವಾಯಿತು. ರಾಗಿಣಿಯನ್ನು ಕೇಳಿದಾಗ, ಅವಳು ನನಗೆ ಗೊತ್ತಿಲ್ಲ. ಮೋಹನ ಹೇಳಲಿಲ್ಲ ಎಂದಳು. ಮೋಹನ ಅವಳನ್ನು ಎಲ್ಲಿಗೆ ಕರೆದುಕೊಂಡು ಹೋದ ಎಂದು ತಿಳಿಯದೇ ಅನುಮಾನದಿಂದ ಅವನಿಗೆ ಹೇಳಿಕಳಿಸಿದಳು.

"ಅವಳು ನಿನ್ನ ಜತೆ ಹೋದಳು. ಅಂತ ರಾಗಿಣಿ ಹೇಳಿದಳು. ಅವಳನ್ನು ಏಕೆ ಮನೆಗೆ ಕರೆದುಕೊಂಡು ಹೋದೆ! ಅವಳ ಅಪ್ಪ ಅಮ್ಮನೂ ಬರಲಿಲ್ಲವಲ್ಲ"

ಮೋಹನ ಮೆಲ್ಲಗೆ ನಡೆದ ವಿಷಯ ತಿಳಿಸಿದ. ಮಾಲತಿಯೂ ತವಕ ಗೊಂಡಳು. "ಛೇ....! ಹೀಗಾಗಬಾರದಾಗಿತ್ತು" ಎಂದು ಲೊಚ್ಚಗುಟ್ಟಿದಳು.

"ನೀನು ಹೋಗಿ ಅವಳನ್ನು ಇಲ್ಲಿಗೆ ಕರೆದುಕೊಂಡು ಬಾ. ಊಟ ನಿದ್ದೆ ಇಲ್ಲದೆ ಕೂತಿರ್ತಾಳೆ"

"ಹುಂ. ರಾಗಿಣೀನ ಕರೆದುಕೊಂಡು ಬರ್ತೀನಿ ಅಂತ ಹೇಳಿ ಬಂದಿದೀನಿ. ಹಾಗೇ ಅವರ ತಾಯಿಗೆ ಒಂದಿಷ್ಟು ಏನಾದರೂ ತಿನ್ನಕ್ಕೆ ಕಟ್ಟಿಸಿಕೊಂಡು ಹೋಗ್ತೀನಿ. ರಾಗಿಣಿಗೆ ಹೇಗೆ ಹೇಳೋದು!"

"ಏನೂ ಹೇಳಲೇ ಬೇಡ. ಸುಮ್ಮನೇ ಕರೆದುಕೊಂಡು ಹೋಗು"

ಊಟದ ಪ್ಯಾಕೆಟ್‌ಗಳನ್ನು ಹಿಡಿದು, ರಾಗಿಣಿಯೊಡನೆ ನರ್ಸಿಂಗ್ ಹೋಂ ಸೇರಿದಾಗ, ವಿಸಿಟರ್ಸ್‌ನ್ನು ಬಿಡುವ ಸಮಯ ಮುಗಿದಿತ್ತು. ಅವನು ವಾಚ್‌ಮನೆಗೆ ದುಡ್ಡುಕೊಟ್ಟು ನರ್ಸಿಂಗ್ ಹೋಂ ಒಳಹೊಕ್ಕ. ಅಲ್ಲಿ ಮಧುರ ಇರಲಿಲ್ಲ. ಅವರ ಅಮ್ಮ ಒಬ್ಬಳೇ ಇದ್ದಳು. ರಾಗಿಣಿ ತಾಯಿಯನ್ನು ಕಂಡು ಗಾಬರಿಯಿಂದ ಅವಳ ಬಳಿಗೆ ಓಡಿದಳು. ತಾಯಿ ರಾಗಿಣಿಯ ತಲೆ ಸವರಿ ನುಡಿದಳು.

"ಈಗ ಪರವಾಗಿಲ್ಲ. ಅವರಿಗೆ ಜ್ಞಾನ ಬಂದಿತ್ತು. ಈಗ ನಿದ್ದೆ ಮಾಡ್ತಿದ್ದಾರೆ. ನಾನು ಇಲ್ಲೇ ಇರುವುದಕ್ಕೆ ಒಪ್ಪಿದ್ದಾರೆ. ಮಧುರ ಮನೆಗೆ ಹೋದಳು. ನೀನು ಛತ್ರಕ್ಕೇ ವಾಪಸ್ಸು ಹೋಗು."

ಮಧುರ ಒಬ್ಬಳೇ ಮನೆಗೆ ಹೋದಳು ಎನ್ನುವುದನ್ನು ತಿಳಿದು ಅವನ ಆತಂಕ ಹೆಚ್ಚಾಯಿತು. ಅವಳಿಗಾಗಿ ಊಟ ತಂದಿದ್ದ. ಹೆಚ್ಚು ಹೊತ್ತು ಅಲ್ಲಿ ನಿಂತಿರುವಂತಿಲ್ಲ. ಆಕೆಯ ಕೈಗೆ ಒಂದು ಪ್ಯಾಕೆಟನ್ನು ಕೊಟ್ಟು ರಾಗಿಣಿಯ ಕೈ ಹಿಡಿದು ಅಲ್ಲಿಂದ ಹೊರಬಿದ್ದ.

ಸೀದಾ ಅವರ ಮನೆಗೆ ಬಂದ. ಅಷ್ಟು ಹೊತ್ತಿನಲ್ಲಿ ಅವನನ್ನು ಕಂಡು ಮಧುರಳ ಎದೆ ನಿಂತಂತಾಯಿತು. "ಅಪ್ಪ ಹೇಗಿದ್ದಾರೆ" ಎಂದು ಕೇಳುವ ಧೈರ್ಯ ಸಹ ಬರಲಿಲ್ಲ. ಅವಳ ಬಿಳಚಿಹೋದ ಮುಖ ನೋಡಿ ಅವನೇ ನುಡಿದ.

"ಒಬ್ಬರೇ ಮನೆಯಲ್ಲಿರುವುದು ಬೇಡ. ಛತ್ರಕ್ಕೆ ಹೋಗೋಣ ಬನ್ನಿ"

"ಪರವಾಗಿಲ್ಲ. ಪಕ್ಕದ ಮನೆ ಹುಡುಗಿ ಜತೆಗೆ ಬರುತ್ತಾಳೆ"

ರಾಗಿಣಿ ಸಹ ಅಕ್ಕನ ಪಕ್ಕ ಹೋಗಿ ನಿಂತಳು.

"ನಾನೂ ಇವಳ ಜತೇನೇ ಇತ್ತೀನಿ" ಇದ್ದಕ್ಕಿದ್ದಂತೆ ರಾಗಿಣಿ ಪ್ರೌಢಯಂತೆ ಮಾತನಾಡಿದಾಗ ಅವನಿಗೆ ಆಶ್ಚರ್ಯವಾಯಿತು.

"ರಾಗಿಣಿ, ಮಾಲತಿ ಒಬ್ಬಳೇ ಆಗ್ತಾಳೆ. ನೀನು ಬೇಕಾದರೆ ಹೋಗು"

"ಒಬ್ಬಳೇ ಹೇಗೆ ಆಗ್ತಾಳೇ! ಮೋಹನ ಇದ್ದಾನೆ.... ನೀನು ಒಬ್ಬಳೇ ಹೇಗೆ ಇರ್ತೀಯಾ ರಾತ್ರಿ ಹೊತ್ತು! ನಿನ್ನನ್ನು ಒಬ್ಬಳನ್ನೇ ಬಿಟ್ಟು ನಾನು ಹೋಗುವುದಿಲ್ಲ"

ಅವರಿಬ್ಬರನ್ನು ಒಪ್ಪಿಸಿ ಕರೆದುಕೊಂಡು ಹೋಗುವುದು ಸುಲಭವಲ್ಲ ಎಂದುಕೊಂಡು, "ಹಾಗಾದ್ರೆ ನಾನು ಬರ್ತೀನಿ. ಎಲ್ಲಾ ಬಾಗಿಲು ಕಿಟಕಿಗಳನ್ನು ಹಾಕಿಕೊಂಡು ಧೈರ್ಯವಾಗಿ ಮಲಗಿ, ನಾನು ನಾಳೆ ಬೆಳಿಗ್ಗೆ ಬರ್ತೀನಿ"

ಅವನು ಬಂದು, ವಿಚಾರಿಸಿ ಸಮಾಧಾನ ಹೇಳಿದ್ದರಿಂದ ಮಧುರಂಗೆ ಹಿತವೆನಿಸಿತ್ತು. ತಮ್ಮನ್ನು ವಿಚಾರಿಸುವವರು. ತಮ್ಮವರು ಎನ್ನುವವರು ಇದ್ದಾರೆ ಎಂದು ಹೃದಯ ಹಿಗ್ಗಿತು. ಅವನಿಗೆ ಹೇಗೆ ಥ್ಯಾಂಕ್ಸ್ ಹೇಳಬೇಕೆಂದು ತಿಳಿಯಲಿಲ್ಲ.

ಮರೆಯದೇ ಅವಳ ಕೈಗೆ ಊಟದ ಪ್ಯಾಕೆಟ್‌ನ್ನು ಕೊಟ್ಟು ಅವರಿಬ್ಬರೂ ಒಳಗೆ ಹೋಗಿ ಬಾಗಿಲು ಹಾಕಿಕೊಳ್ಳುವವರೆಗೂ ಅಲ್ಲಿ ನಿಂತಿದ್ದು, ನಂತರ ಹೊರಟ.

ಛತ್ರಕ್ಕೆ ವಾಪಸ್ಸು ಬಂದಾಗ, ಮಾಲತಿ ಅವನಿಗಾಗಿಯೇ ಕಾದಿದ್ದಳು. ಒಬ್ಬನೇ ಕುಳಿತು ಊಟ ಮಾಡುತ್ತಾ ಮಾಲತಿಗೆ ವಿವರಿಸಿದ. ಭವಾನಮ್ಮನಿಗೆ ಅಸಹನೆ ಹೆಚ್ಚಿತ್ತು ಮನೆಯ ಮುಖ್ಯವಾದ ಕೆಲಸವನ್ನು ಬಿಟ್ಟು ಅಲ್ಲಿ ಹೋಗುವಂಥಾದ್ದು ಏನಿತ್ತು ಅಂತ ಆಕ್ಷೇಪಿಸಿದಳು.

"ಯಾಕಮ್ಮ.... ಇಷ್ಟು ಸಣ್ಣ ಬುದ್ಧಿ ನಿನಗೆ! ಮಧುರಳ ಮನೆಯವರು ಬರದಿದ್ದರೆ ನನ್ನ ಮದುವೆ ಏನು ನಿಂತು ಹೋಗುವುದಿಲ್ಲ. ಆದರೆ ಅವಳೂ

ಹುಡುಗಿ, ಅವಳಿಗೆ ನಮ್ಮಂತಹವರ ಸಹಾಯದ ಅವಶ್ಯಕತೆ ಇದೆ ಅಂತ ನಿನಗೇಕೆ ಅನ್ನಿಸುತ್ತಿಲ್ಲ? ಸಮಯದಲ್ಲಿ ಸಹಾಯ ಮಾಡದಿದ್ದರೆ ನಾವು ಮನುಷ್ಯರಾಗಿದ್ದೂ ಏನು ಪ್ರಯೋಜನ?" ಎಂದು ಸಿಡುಕಿದಳು ಮಾಲತಿ.

"ಸಹಾಯ ಮಾಡಲಿ ನಾನು ಬೇಡವೆನ್ನುವುದಿಲ್ಲ. ಆದರೆ ಇಲ್ಲಿ ಇಷ್ಟು ಕೆಲಸವನ್ನಿಟ್ಟುಕೊಂಡು, ಇವನೇ ಹೋಗಬೇಕೆ?"

"ಮತ್ಯಾರು ಹೋಗಬೇಕಾಗಿತ್ತು! ನಾನು, ನೀನು, ಅಪ್ಪ ಯಾರೂ ಹೋಗುವಂತಿಲ್ಲ. ನಮ್ಮ ಮನೆ ಮದುವೆಗೇಂತ ಹೊರಟವಗಿಗೆ ಆಕ್ಸಿಡೆಂಟಾಗಿದೆ. ಅವರ ಹತ್ತಿರದ ಸಂಬಂಧಿಗಳು ಯಾರು ಅಂತ ಸಹ ನಮಗೆ ಗೊತ್ತಿಲ್ಲವಲ್ಲ"

"ಅದೇನೋ ಕಾಣೆ, ಆ ಅಕ್ಕತಂಗಿಯರನ್ನು ನೀವು ಅಣ್ಣತಂಗಿಯರು ಸದಾ ವಹಿಸಿಕೊಳ್ತೀರಿ. ನೀವು ಮಾಡಿದ್ದೇ ಸರಿ ಎನ್ನುವ ವಾದ ಬೇರೆ...."

"ವಾದ ವಿವಾದದ ಮಾತಲ್ಲ. ನಿಧಾನವಾಗಿ ಯೋಚಿಸು. ಮೋಹನ ಮಾಡಿದ್ದು ತಪ್ಪು ಅಂತ ಅನ್ನಿಸಿದರೆ ನೇರವಾಗಿ ಹೇಳಿಬಿಡು. ನಾನು ಅವನ ಪರವಾಗಿ ಕ್ಷಮೆ ಕೇಳ್ತೀನಿ. ನನ್ನ ಮದುವೆಯಲ್ಲಿ ನನ್ನ ಸ್ನೇಹಿತೆಗೆ ಅನ್ಯಾಯವಾಗುತ್ತಿರುವುದು, ಅದರ ಜವಾಬ್ದಾರಿ ನನಗೇ"

"ಮಾಲಾ ಸುಮ್ಮನಿರು.... ಈಗ ಸುಮ್ಮನಿರು..... ಈಗ ಮಾತೇಕೆ? ಆತನಿಗೆ ಜ್ಞಾನ ಬಂದಿದೆ. ಪರವಾಗಿಲ್ಲ. ಅಂತ ಡಾಕ್ಟರು ಹೇಳಿದ್ದಾರೆ. ನಿಶ್ಚಿಂತೆಯಾಗಿ ನಿದ್ದೆ ಮಾಡು"

ತಾಯಿ ಮುಖ ಊದಿಸಿಕೊಂಡು ಅಲ್ಲಿಂದ ಹೋದಾಗ,

"ಈ ರಾತ್ರಿ ನನಗೆ ನಿದ್ದೆಯಂತೂ ಖಂಡಿತಾ ಬರುವುದಿಲ್ಲ" ಎಂದಳು ಮಾಲತಿ.

"ಈ ರಾತ್ತಿ ಮನೋಹರನಿಗೂ ಬಹುಶಃ ನಿದ್ದೆ ಬರಲಾರದು. ಅವನನ್ನು ಕರೆದುಕೊಂಡು ಬರ್ತೀನಿ. ಇಬ್ಬರೂ ರಾತ್ರಿಯಲ್ಲಾ ಹರಟೆ ಹೊಡೆಯೋರಂತೆ" ಪಿಸುದನಿಯಲ್ಲಿ ಹೇಳಿದ ಮೋಹನ್.

"ಶ್, ಅಮ್ಮನಿಗೆ ಕೇಳಿಸಿದರೆ ಆಯ್ತು. ನನ್ನ [illegible] ಗತಿ" ಇಬ್ಬರೂ ನಕ್ಕಾಗ ವಾತಾವರಣ ಬಿಗುವನ್ನು ಕಳಚಿಕೊಂಡಿತು.

ಬೆಳಿಗ್ಗೆ ಹೊತ್ತಿಗೆ ಮುಂಚೆ ಎದ್ದವನೇ, ಮೊದಲು ತನ್ನ ಮನೆಗೆ ಹೋಗಿ ಸ್ನಾನ ಮಾಡಿ, ಅಲ್ಲಿಂದ ಸೀದಾ ಮಧುರಳ ಮನೆಗೆ ಬಂದ ಮೋಹನ. ಅವಳು ಆಸ್ಪತ್ರೆಗೆ ಹೊರಟು ನಿಂತಿದ್ದಳು.

ಬೆಳಿಗ್ಗೆ ಬೆಳಿಗ್ಗೆಯೇ ಅವನು ತನ್ನನ್ನು ವಿಚಾರಿಸಲು ಬಂದಿದ್ದಾನೆಂದು

ಅವಳ ಹೃದಯ ಹೂವಾಯಿತು.

"ಬರ್ತೀರಾ, ನಿಮ್ಮನ್ನು ಆಸ್ಪತ್ರೆ ತನಕ ಬಿಡ್ತೀನಿ...."

"ಪರವಾಗಿಲ್ಲ. ನಾನು ರಾಗಿಣಿ ಒಟ್ಟಿಗೇ ಹೋಗ್ತೀವಿ."

"ಮದುವೆಗೆ ಬರ್ತೀರಿ ತಾನೇ.... ಮಾಲತಿ ರಾತ್ರಿಯೆಲ್ಲಾ ಚಡಪಡಿಸಿದಳು. ಅವಳು ನಿಮಗೋಸ್ಕರ ಕಾಯ್ತಾ ಇದ್ದಾಳೆ...."

"ಆಸ್ಪತ್ರೆಗೆ ಹೋಗಿ ಅಲ್ಲಿಂದ ಬರ್ತೀನಿ" ಎಂದಳು. ಮೋಹನ ಮುದಗೊಂಡ, ಸಣ್ಣದಾಗಿ ಸಿಳ್ಳು ಹೊಡೆಯುತ್ತಾ ಸ್ಕೂಟರನ್ನೇರಿದ.

ಆ ದಿನದ ಮದುವೆಯ ಕಲಾಪಗಳೆಲ್ಲ ಮುಗಿದು, ಊಟದ ಸಮಯವಾದರೂ, ಮಧುರ ಅಥವಾ ರಾಗಿಣಿ ಬರದಿದ್ದಾಗ, ಮೋಹನನಿಗೆ ಆತಂಕಕ್ಕಿಂತ ಹೆಚ್ಚು ಅಸಮಾಧಾನವಾಗಿತ್ತು. ಕೇಶವನ ಕಣ್ಣುಗಳು ಅವಳನ್ನು ಹುಡುಕಿ, ನಿರಾಶೆಗೊಂಡಿದ್ದನ್ನು ಗಮನಿಸಿದ್ದ. ಒಂದು ತರಹದ ಆನಂದವಾಗಿತ್ತು. ರಾಗಿಣಿಯೂ ಬರದೇ ಇದ್ದುದನ್ನು ಕಂಡು ವ್ಯಸನವಾಗಿತ್ತು. ಸಾಹಂಕಾಲದ ರಿಸೆಪ್ಶನ್‌ಗೆ ತಾನೇ ಹೋಗಿ ಕರೆದುಕೊಂಡು ಬರಬೇಕೆಂದು ಕೊಂಡ.

ಮಾಲತಿ, ಎದ್ದು ಕೂತು, ಬಗ್ಗಿ ಸುಸ್ತಾಗಿದ್ದಳು. ಅಲ್ಲದೇ ಅವಳು ಈ ಲೋಕವನ್ನೇ ಮರೆತವಳಂತೆ ಕಂಡುಬರುತ್ತಿದ್ದಳು. ಮಧುರ, ರಾಗಿಣಿಯರು ಬಂದಿಲ್ಲದರ ಬಗ್ಗೆ ಅವಳು ಹೆಚ್ಚಗೆ ಚಿಂತಿಸಲಿಲ್ಲ.

ಅವಳ ಅಪ್ಪ ಈಗ ಹೇಗಿದ್ದಾರೋ, ಯಾಕೆ ಬರಲಿಲ್ಲವೋ ಎಂದು ಒಂದುಸಲ ಮಾತ್ರ ಅಂದುಕೊಂಡಿದ್ದಳು. ತನಗೆ ಬಿಡುವಿದ್ದರೆ ಹೋಗಿ ಬರಬೇಕೆಂದು ಕೊಂಡಳು. ಆದರೆ ಅವಳೇ ಮದು ಮಗಳಾಗಿದ್ದುದರಿಂದ ಚಪ್ಪರಬಿಟ್ಟು ಎಲ್ಲೂ ಹೋಗುವಂತಿಲ್ಲ.

ರಿಸೆಪ್ಶನ್‌ಗೆಂದು ಅಲಂಕರಿಸಿ ಕೊಳ್ಳಲು, ಬ್ಯೂಟಿ ಪಾರ್ಲರ್‌ಗೆ ಹೋಗುವ ಮಾರ್ಗದಲ್ಲಿ ಒಂದು ಘಳಿಗೆ ಹೋಗಿ ನೋಡಿ ಮಾತನಾಡಿಸಿಕೊಂಡು ಬರಬೇಕೆಂದುಕೊಂಡಳು.

"ಹಸಿವೈ ಹುಡುಗಿ, ಎಲ್ಲಾ ಬಿಟ್ಟು ಆಸ್ಪತ್ರೆಗೇಕೆ ಹೋಗಬೇಕು? ಮನೆಗೆ ಬಂದಮೇಲೆ ಹೋಗಿ ನೋಡಿದರಾಯ್ತು" ಭವಾನಮ್ಮ ಗದರಿದಾಗ ಮಾಲತಿ ವಿಧಿ ಇಲ್ಲದೆ ಸುಮ್ಮನಾದಳು.

ರಿಸೆಪ್ಶನ್‌ಗೆ ವಧೂವರರು ಸಿದ್ಧರಾಗಿ, ಆಸೀನರಾಗುವ ಮೊದಲೇ ಮೋಹನ ಮಧುರಳ ಮನೆ ಕಡೆ ಹೊರಟ. ಅವಳು ಆಸ್ಪತ್ರೆಯಲ್ಲಿದ್ದಾಳೆಂದು ಅವರಮ್ಮ ತಿಳಿಸಿದ್ದರಿಂದ ಅಲ್ಲಿಗೇ ಹೋಗಿದ್ದ. "ನೆನ್ನೆಯಿಂದ ಅಮ್ಮ ಒಬ್ಬಳೇ ಇಲ್ಲಿ

ಕೂತಿದ್ದಳು. ಮತ್ತೆ ರಾತ್ರಿ ಇಲ್ಲೇ ಮಲಗಬೇಕು. ನಾನು ಅವಳು ಬರುವವರೆಗೂ ಇಲ್ಲಿ ಇರಬೇಕಾಗುತ್ತದೆ. ರಾಗಿಣಿಯನ್ನು ಕರೆದುಕೊಂಡು ಹೋಗಿ"

ಅವನು ಸ್ವಲ್ಪ ಹೊತ್ತು ಅವಳ ಜತೆ ಮಾತನಾಡುತ್ತಾ ನಿಂತಿದ್ದ.

"ಏನಾದ್ರೂ ಹಣ ಬೇಕಿತ್ತಾ!" ಕೇಳಿದ.

'ಹುಂ' ಎಂದಳು ಸಂಕೋಚದಿಂದ. ಅವನು ನೋಟುಗಳನ್ನು ಎಣಿಸಿ ಅವಳಿಗೆ ಅಗತ್ಯವಿದ್ದುದಕ್ಕಿಂತ ಹೆಚ್ಚಿಗೆ ಕೊಟ್ಟ.

"ಇರಲಿ, ಇಟ್ಟುಕೊಂಡಿರಿ" ಎಂದವನು ಅಲ್ಲಿಂದ ಮತ್ತೆ ಅವಳ ಮನೆಗೆ ಬಂದು ರಾಗಿಣಿಯನ್ನು ಬಲವಂತವಾಗಿ ಹೊರಡಿಸಿಕೊಂಡು ಛತ್ರಕ್ಕೆ ಬಂದ.

ಇವನಿಗೆ ಈ ಅಕ್ಕತಂಗಿಯರ ಭೂತ ಹಿಡಿದಿದೆ ಎಂದುಕೊಂಡಳು ಭವಾನಮ್ಮ, ಅವರಿಬ್ಬರೂ ಬಂದಾಗ. ಆದರೂ, ಅವಳನ್ನು ಮಾಲತಿಯ ಪಕ್ಕದಲ್ಲೇ ಇರುವಂತೆ ಹೇಳಿದಳು.

"ಮಾಲತಿಗೆ ಬರುವ ಉಡುಗೊರೇನೆಲ್ಲಾ ನಿನ್ನ ಹತ್ತಿರಾನೇ ಇಟ್ಕೊಂಡಿರು" ಎಂದು ಅವಳಿಗೆ ಆ ಕೆಲಸ ವಹಿಸಿದಳು ಭವಾನಮ್ಮ.

ಆಹ್ವಾನಿತರ ಸಂಖ್ಯೆ ಕಡಿಮೆಯಾಗುತ್ತಲೇ ಮೋಹನ ರಾಗಿಣಿಯನ್ನು ಬಿಟ್ಟು ಬರಲು ಹೊರಟ. ರಿಸೆಪ್ಶನ್‌ಗೆಂದು ಮಾಡಿಸಿದ್ದ ವಿಶೇಷ ತಿನಿಸುಗಳನ್ನು ಕಟ್ಟಿಸಿಕೊಂಡ. ಮಾಲತಿಗೆ ಮಾತ್ರ ತಿಳಿಸಿ, ಹೊರಟಿದ್ದ. ಅವರ ಮನೆಗೆ ಬಂದು ಅವಳನ್ನು ಇಳಿಸಿ, ಅವರ ತಾಯಿಯನ್ನು ಆಸ್ಪತ್ರೆಗೆ ಬಿಡುವುದಾಗಿ ಹೇಳಿದ.

"ನನಗೆ ಸ್ಕೂಟರ್‌ನಲ್ಲಿ ಕೂತು ಅಭ್ಯಾಸವಿಲ್ಲ. ನನಗೆ ಒಂದು ಆಟೋ ತಂದು ಕೊಡಿ" ಎಂದು ಆಕೆ ಬಾಯಿಬಿಟ್ಟು ಕೇಳಿದಾಗ ಅವನಿಗೆ ನಿರಾಳವಾಯಿತು.

ಆಕೆ ಒಂದು ತುತ್ತು ಊಟ ಮಾಡಿ, ಗಂಡನಿಗೆ ಡಬ್ಬಿಗಳಲ್ಲಿ ತುಂಬಿಕೊಳ್ಳವರೆಗೂ ಕಾದಿದ್ದ. ನಂತರ ಒಂದು ಆಟೋ ತಂದ. ತಾನೂ ಜತೆಯಲ್ಲಿ ಹೊರಟ.

ಆಸ್ಪತ್ರೆಯ ವಿಸಿಟರ್ಸ್ ಅವಧಿ ಮುಗಿದುಹೋಗಿದ್ದುದರಿಂದ, ಆಕೆ ಮಾತ್ರ ಒಳಗೆ ಹೋದಳು. ಅವನು ಮಧುರಳಿಗಾಗಿ ಅಲ್ಲಿಯೇ ಕಾದಿದ್ದ. ಅವಳು ಬಂದೊಡನೆ ಅವಳನ್ನು ಸ್ಕೂಟರ್‌ನಲ್ಲಿ ಅವರ ಮನೆ ತಲುಪಿಸಿದ. ಇಷ್ಟೆಲ್ಲಾ ಓಡಾಡಿದರೂ ಅವನಿಗೆ ಬೇಸರವೆನಿಸಲಿಲ್ಲ. ತನ್ನ ಕರ್ತವ್ಯ ನಿಭಾಯಿಸುತ್ತಿದೇನೆಂಬ ನೆಮ್ಮದಿ ಅವನಲ್ಲಿತ್ತು.

ಮತ್ತೆ ಛತ್ರಕ್ಕೆ ಬರುವ ಹೊತ್ತಿಗೆ, ಮಾಲತಿ ಗಂಡನೊಡನೆ ಅವರ ಮನೆಗೆ ಹೊರಟಿದ್ದಳು. ಅವಳು ಮಂಕಾಗಿದ್ದುದನ್ನು, ಕಣ್ಣೊರೆಸಿಕೊಳ್ಳುತಿದ್ದುದ್ದನ್ನು ಗಮನಿಸಿ, ಹಾಗೇ ನಿಂತ. ಮಾತನಾಡಲು ಶಬ್ದಗಳೇ ಇಲ್ಲವೇನೋ ಎಂಬಂತೆ, ಗಂಟಲು ಕಟ್ಟಿದಂತಾಗಿತ್ತು. ಮಾಲತಿ ಅವನ ಬಳಿ ನಿಂತಾಗ, ಅವಳ ಭುಜದ ಮೇಲೆ ಕೈ ಇಟ್ಟು ಪ್ರೀತಿಯ ಹಾರೈಕೆಯನ್ನು ವ್ಯಕ್ತಪಡಿಸಿದ. ಮನೋಹರನ ಕೈ ಕುಲುಕಿ 'ಶುಭಾಶಯ' ಹೇಳಿದ.

ವಧುವರರು ಕುಳಿತಿದ್ದ ಕಾರು ಮರೆಯಾಗುವವರೆಗೂ ಅಲ್ಲಿಯೇ ನಿಂತಿದ್ದು ನಂತರ ಒಳಗೆ ಬಂದ. ಆಗಲೇ ಛತ್ರವನ್ನು ಬಿಡಬೇಕಾಗಿದ್ದುದರಿಂದ ಬೇಕಾದಷ್ಟು ಕೆಲಸಗಳಿದ್ದವು. ಅವರಿವರ ನೆರವಿನಿಂದ ಉಳಿದ ಸಾಮಾನುಗಳನ್ನು ಕಟ್ಟಿಕೊಂಡು, ಮನೆ ಸೇರಿದಾಗ, ಅರ್ಧರಾತ್ರಿ ಕಳೆದಿತ್ತು. ಹಾಸಿಗೆಯನ್ನು ಕಂಡೊಡನೆ ಬಿದ್ದುಕೊಂಡೇನೇ ಎನಿಸಿತ್ತು. ಜತೆಯಲ್ಲಿ ಬಂದಿದ್ದ ನೆಂಟರಿಷ್ಟರು ಮಾತುಕತೆ ಮುಗಿಸುವಂತೆ ಕಾಣಲಿಲ್ಲ. ಇವನ ಪಾಡಿಗೆ ಇವನು ಮಲಗಿದ. ಆಗ ನೆನಪಿಗೆ ಬಂತು ತಾನು ರಾತ್ರಿಯ ಊಟವನ್ನೇ ಮಾಡಿಲ್ಲವೆಂದು ನಗುಬಂತು.

ತನ್ನ ತಂಗಿಯ ಮದುವೆ. ಅಷ್ಟು ವಿಶೇಷ ಭಕ್ಷ ಭೋಜ್ಯಗಳಿದ್ದರೂ ತನಗೆ ಊಟ ಮಾಡಲು ಸಮಯವೇ ಇರಲಿಲ್ಲ. ಮಧುರ ಸಹ ಊಟ ಮಾಡಿದಳೋ ಇಲ್ಲವೋ..... ಪಾಪ. ಸ್ನೇಹಿತೆಯ ಮದುವೆ ಎಂದು ತಿಂಗಳಾನುಗಟ್ಟಲೆಯಿಂದ ಕಾದಿದ್ದವಳಿಗೆ ಹೀಗಾಯಿತಲ್ಲ ಎನಿಸಿತ್ತು. ಆಯಾಸದಿಂದ ಕಣ್ಣೆವೆಗಳು ಮುಚ್ಚಿಕೊಂಡಾಗ ನಿದ್ದೆಯ ಆಳಕ್ಕೆ ಇಳಿದ ಮೋಹನ.

ಬೆಳಿಗ್ಗೆ ಅವನಿಗೆ ಎಚ್ಚರವಾದಾಗ ಚೆನ್ನಾಗಿ ಬೆಳಕಾಗಿತ್ತು. ಗಡಬಡಿಸಿ ಎದ್ದು ಆಫೀಸಿಗೆ ಹೋಗುವ ಚಿಂತೆ ಇರಲಿಲ್ಲ. ಒಂದು ವಾರದ ರಜ ಹಾಕಿದ್ದ. ಹಾಗೇ ಮಲಗಿದ್ದವನು ವೇಳೆ ನೋಡಿಕೊಂಡ. ಒಂಭತ್ತಾಗಿತ್ತು. ಎದ್ದು ಹೊರಗೆ ಬಂದ.

"ತಿರುಗಾಡಿ ತಿರುಗಾಡಿ, ಅದೆಷ್ಟು ಸುಸ್ತಾಗಿದೆಯೋ, ಬೇಕಾದರೆ ಇನ್ನು ಸ್ವಲ್ಪಹೊತ್ತು ಮಲಗಿರು" ಕಾಫಿ ಕುಡಿಯುತ್ತಿದ್ದ ತಂದೆ ನುಡಿದಾಗ ತಲೆ ಕೊಡವಿದ.

"ಈಗ ನೀನು ಇನ್ನೆಲ್ಲೂ ಹೋಗಬೇಡ. ಇವತ್ತು ಬೀಗರ ಮನೆಯಲ್ಲಿ ನಮಗೆಲ್ಲ ಔತಣ. ಅಲ್ಲಿಗೆ ಹೋಗಬೇಕು" ತಾಯಿ ಗಡುಸಾಗಿ ನುಡಿದಾಗ ಅವಳನ್ನೇ ನೋಡಿದ. ಅವಳ ಮಾತಿನ ಅರ್ಥ ತಿಳಿದಿತ್ತು.

ಯಾರಿಗೂ ಏನೂ ಉತ್ತರಿಸದೇ ತನ್ನ ಪಾಡಿಗೆ ತಾನು ಸಿದ್ದನಾದ.

ಸೀದಾ ಆಸ್ಪತ್ರೆಗೆ ಬಂದ. ಮಧುರ, ತನ್ನ ತಾಯಿಯ ಬರವನ್ನು ಎದುರು ನೋಡುತ್ತಾ ಕುಳಿತಿದ್ದಳು. ಬೇಗನೆದ್ದು, ತನಗಾಗಿ ಬಂದಿದ್ದಾನೆ ಎಂದೆನಿಸಿದಾಗ ಮುಖದಲ್ಲಿ ಮುಗುಳ್ನಗೆ ಮೂಡಿತು. ಅವನೂ ಮುಗುಳ್ನಕ್ಕ. "ಹೇಗಿದ್ದಾರೆ?" ಕೇಳಿದ.

"ಇನ್ನೂ ನೋವಿದೆ ಅಂತ ಕಾಣುತ್ತೆ. ಏಳಕ್ಕೆ ಆಗುತ್ತಿಲ್ಲ. ಕೈಗೆ ಪೆಟ್ಟಾಗಿದೆ. ಒಂದು ಕಾಲಿಗೆ ಪ್ಲಾಸ್ಟರ್ ಹಾಕಿದ್ದಾರೆ"

"ಓ.... ನೆನ್ನೆ ದಿನ ಇದನ್ನೆಲ್ಲ ತಿಳಿದುಕೊಳ್ಳಲೇ ಇಲ್ಲ" ಎಂದು ಮನದಲ್ಲೇ ಹೇಳಿಕೊಂಡ ಮೋಹನ.

"ಹಾಗಾದರೆ ಎಷ್ಟುದಿನ ಇಲ್ಲಿ ಇರಬೇಕಾಗುತ್ತೊ?" ಎಂದು ವಿಚಾರಿಸಿದ.

"ಏನೋ ಗೊತ್ತಿಲ್ಲ. ಸರಿಯಾಗಿ ಹೇಳಿಲ್ಲ. ಅಮ್ಮ ಬಂದ ಮೇಲೆ ವಿಚಾರಿಸ್ತಾಳೆ. ಡಾಕ್ಟರುಗಳು ಇನ್ನೂ ಬಂದಿಲ್ಲ."

"ಇವತ್ತು ಮಾಲತಿಯ ಗಂಡನ ಮನೆಯಲ್ಲಿ ನಮಗೆ ಔತಣಕೂಟ. ನಿಮ್ಮನ್ನು ಖಂಡಿತಾ ಕರೆದುಕೊಂಡುಬರಬೇಕೆಂದು ಹೇಳಿದ್ದಾರೆ. ಬರ್ತೀರಾ?"

ಅವಳು ಏನನ್ನೂ ಹೇಳಲಿಲ್ಲ.

"ಈಗ ಆತಂಕವೂ ಕಡಿಮೆ ಆಗಿದೆ. ಬರುಲ್ಲ ಅಂತ ಅನ್ನಬೇಡಿ. ದಯವಿಟ್ಟು ನಿಮ್ಮ ಸ್ನೇಹಿತೆಗೋಸ್ಕರ ಬನ್ನಿ"

"ಆಗಲಿ ಪ್ರಯತ್ನಪಡ್ತೀನಿ. ಅಮ್ಮ ಬರಲಿ ಮೊದಲು"

"ನಾನು ಹೋಗಿ ಅವರನ್ನು ಕರೆದುಕೊಂಡು ಬರಲಿ?"

"ಸುಮ್ಮನೇ ಏಕೆ! ಅವರು ಸ್ಕೂಟರ್ ಮೇಲೆ ಕುಳಿತುಕೊಳ್ಳಲ್ಲ"

ಇಬ್ಬರೂ ಅದೂ ಇದೂ ಮಾತನಾಡುತ್ತಾ ಸಮಯ ಕಳೆಯುವಷ್ಟರಲ್ಲಿ ಆಕೆ ಬಂದಳು. ಮೋಹನ ತನಗಿಂತ ಮುಂಚೆ ಬಂದು ನಿಂತು, ಮಗಳೊಡನೆ ಮಾತನಾಡುತ್ತಿದ್ದುದನ್ನು ಕಂಡು ಯಾವ ಭಾವನೆಯನ್ನು ವ್ಯಕ್ತಪಡಿಸಲಿಲ್ಲ. ಅವನೇ

"ಬರ್ತೀರಾ ಮಧುರ, ನಿಮ್ಮನ್ನು ಮನೆಗೆ ಬಿಟ್ಟು ಹಾಗೇ ಹೋಗ್ತೀನಿ" ಎಂದ.

ಅಮ್ಮನಿಗೆ, ಮಾಲತಿ ಮನೆಯ ಆಹ್ವಾನ ತಿಳಿಸಿ, "ಹೋಗಿ ಬರಲೇನಮ...?" ಅಂತ ಕೇಳಿದಳು.

"ನಿನಗಿಷ್ಟವಿದ್ದರೆ ಹೋಗಿ ಬಾ. ಆದರೆ ಬೇಗ ಬಂದುಬಿಡು" ಎಚ್ಚರಿಕೆಯ ನುಡಿಗಳನ್ನಾಡಿದಳು. ಮೋಹನ ಒಳಗೆ ಹೋಗಿ ಅವಳ ತಂದೆಯನ್ನು

ಮಾತನಾಡಿಸಿ, ಆಚೆಗೆ, ಬಂದ. ಮಧುರ ಸಂಕೋಚದಿಂದ ಅವನ ಜತೆ ಹೊರಟಳು.

ರಾಗಿಣಿಯಿನ್ನು ಸ್ಕೂಲಿಗೆ ಹೋಗಿರಲಿಲ್ಲ. "ನೀವು ಹೋಗಿ, ನಾನು ಬರ್ತೀನಿ" ಎಂದಳು. ಆಮೇಲೆ ಅವಳು ಬರುವುದರ ನೆಚ್ಚಿಕೆ ಇರಲಿಲ್ಲವಾದ್ದರಿಂದ ಹೇಳಿದ.

"ನಾನು ಇವಳನ್ನು ಸ್ಕೂಲಿಗೆ ಬಿಟ್ಟು ಬರ್ತೀನಿ. ಅಷ್ಟರಲ್ಲಿ ನೀವು ರೆಡಿಯಾಗಿರಿ. ನಾನು ನಿಮ್ಮನ್ನು ಕರೆದುಕೊಂಡೇ ಹೋಗ್ತೀನಿ"

"ಯಾಕೆ, ನನ್ನ ಮೇಲೆ ನಂಬಿಕೆ ಇಲ್ಲವೆ?"

"ಇಲ್ಲ. ನೀವು ಒಬ್ಬರೇ ಖಂಡಿತಾ ಬರುವುದಿಲ್ಲ ನನಗೆ ಗೊತ್ತು" ಅವಳ ಉತ್ತರಕ್ಕೆ ಕಾಯದೇ ರಾಗಿಣಿಯನ್ನು ಹೊರಡಿಸಿದ.

ಅವನು ಮತ್ತೆ ವಾಪಸ್ಸು ಬರುವಷ್ಟರಲ್ಲಿ, ಮಧುರ ಸಿದ್ಧಳಾಗಿದ್ದಳು.

'ಗುಡ್' ಎಂದ ಸಂತಸದಿಂದ.

ಈ ಸಂತಸಕ್ಕಾಗಿ ತಾನು ಸಿದ್ದಳಾದೆ ಎಂದು ಹೇಳುವ ತವಕವಾದರೂ ಮನದಲ್ಲೇ ಭಾವನೆಯನ್ನು ತಡೆದಿಟ್ಟುಕೊಂಡಳು. ಮನೆಗೆ ಬೀಗ ಹಾಕಿ ಅವಳು ಬರುವಷ್ಟರಲ್ಲಿ ಅವನು ಸ್ಕೂಟರ್ ಸ್ಟಾರ್ಟ್ ಮಾಡಿದ್ದ. ಅವಳು ಹತ್ತಿದಳು. ಪುಷ್ಪಕ ವಿಮಾನದಲ್ಲಿ ಕುಳಿತು ಅನುಭವವಾಗಿತ್ತು.

ಮನೆಗೆ ಬಂದಾಗ ಬೀಗ ಹಾಕಿತ್ತು.

"ಆಗಲೇ ಎಲ್ಲಾ ಹೊರಟು ಹೋಗಿದ್ದಾರೆ ಅಂತ ಕಾಣಿಸುತ್ತೆ. ಪಕ್ಕದ ಮನೆಯಲ್ಲಿ ಬೀಗದ ಕೈ ಇರುತ್ತೆ ಕೇಳ್ತೀನಿ"

"ಸೀದಾ ಅವಳ ಮನೆಗೇ ಹೊರಟು ಹೋಗೋಣ" ಮಧುರ ನುಡಿದಾಗ ವಿಚಿತ್ರವಾಗಿ ಅವಳನ್ನೇ ನೋಡಿದ. ತನ್ನ ಮಾತಿನರ್ಥವನ್ನು ತಪ್ಪಾಗಿ ತಿಳಿದುಕೊಂಡಿದ್ದಾನೆಂದು ಭಾವಿಸಿ. ಸುಮ್ಮನೇ ನಿಂತಳು. ಅವನು ಏನೂ ಹೇಳದೇ ಬೀಗದ ಕೈಯನ್ನು ತಂದು ಬಾಗಿಲನ್ನು ತೆಗೆದು ಒಳಗೆ ಬಂದು ನಿಂತು, "ಬನ್ನಿ ಒಳಗೆ" ಎಂದ.

ಅತ್ತಿತ್ತ ಅನುಮಾನದಿಂದ ನೋಡುತ್ತಾ ಅವಳು ಒಳಗೆ ಬಂದಳು. ತಕ್ಷಣ ಅವನು ಅವಳೆದುರಿಗೆ ನಿಂತು ಕೇಳಿದ.

"ಎಷ್ಟುವರ್ಷದಿಂದ ನನ್ನನ್ನು ನೋಡಿದೀಯಾ, ನನ್ನ ಮೇಲೆ ಅನುಮಾನವಿದ್ದರೆ ಹೇಳಿಬಿಡು" ಏಕವಚನದಲ್ಲಿ ನುಡಿದಿದ್ದ.

"ಹಾಗೇನಿಲ್ಲ" ತೊದಲಿದಳು.

"ಸರಿ, ಹಾಗಾದ್ರೆ ಕೂತ್ಕೊ" ಮತ್ತೆ ಅವನು ಆಜ್ಞೆಯಿಂದ ಹೇಳಿದಂತೆ ಅನ್ನಿಸಿದಾಗ ಅವಳು ಮುದುಡಿ ಸೋಫಾದ ಮೇಲೆ ಕುಳಿತಳು.

"ಈಗ ಬಂದೆ" ಎಂದು ಹೇಳಿ ಒಳಗೆಹೋಗಿ. ಹಿಂದಿನ ದಿನ ತಂದಿದ್ದ ಮದುವೆ ಮನೆಯ ಸಿಹಿತಿಂಡಿಗಳನ್ನು ಒಂದು ತಟ್ಟೆಗೆ ಹಾಕಿ ತಂದಿತ್ತು.

"ತಿನ್ನು" ಎಂದ. ಅವಳು ಅವನ ಕಡೆ ನೋಡಿದಳು.

"ನನಗೆ ಗೊತ್ತು. ನೀನು ಎರಡು ದಿನದಿಂದ ಸರಿಯಾಗಿ ಊಟ ತಿಂಡಿ ಏನನ್ನೂ ತಿಂದಿಲ್ಲ ಅಂತ. ಪ್ಲೀಸ್ ತಿನ್ನು" ಎಂದು ಮತ್ತೆ ಹೇಳಿದ.

ತನಗಾಗಿ ಎಷ್ಟು ಕಳಕಳಿಯಿಂದ ಹೇಳುತ್ತಿದ್ದಾನೆಂದುಕೊಂಡು ಒಂದೊಂದನ್ನೇ ತಿಂದಳು. ಡಿಕಾಕ್ಷನ್‌ಗೆ ಹಾಲು ಸಕ್ಕರೆ ಬೆರೆಸಿ, ಕಾಫಿ ಮಾಡಿ ತಂದು ಅವಳ ಮುಂದೆ ಇಟ್ಟು ತಾನೂ ಒಂದು ಕಪ್ಪನ್ನು ಹಿಡಿದು ಕುಳಿತ.

ಅವಳು ನಾಚಿಕೆಯಿಂದ ಕಾಫಿಕುಡಿದು, "ಥ್ಯಾಂಕ್ಸ್" ಎಂದಳು.

"ಬರೇ ಥ್ಯಾಂಕ್ಸ್ ಹೇಳಿದರೆ ಸಾಲದು" ಎಂದ ಹೆದರಿಸುವವನಂತೆ. ಮತ್ತೆ? ಎನ್ನುವಂತೆ ಅವಳು ತಲೆ ಎತ್ತಿ ನೋಡಿದಾಗ ತನ್ನ ಮನಸ್ಸಿನ ಆಸೆಯನ್ನು ತಿಳಿಸುವ ಆಸೆಯಾಯಿತು. ಅವನೇನು ಹೇಳಿಬಿಡುವನೋ ಎಂದು ಅವಳು ಅವನನ್ನೇ ತವಕದಿಂದ ನೋಡಿದಳು. ಅವಳ ಭಯ ಗಮನಿಸಿ, ಅವನು ಹಗುರವಾಗಿ ನಕ್ಕ.

"ನಡೀ ಹೊರಡೋಣ" ಎಂದವನು, "ಸಾರಿ, ಮಧುರ ಇದ್ದಕ್ಕಿದ್ದಂತೆಯೇ ಏಕವಚನ ಪ್ರಾರಂಭಿಸಿಬಿಟ್ಟೆ" ಎಂದ ಮೋಹನ.

"ಪರವಾಗಿಲ್ಲ. ನಾನು ನಿಮಗಿಂತ ಚಿಕ್ಕವಳು."

"ಯಾಕೋ ಹೊರಡುವ ಮನಸ್ಸೇ ಆಗ್ತಿಲ್ಲ. ಆದರೆ ಮಾಲತಿ ನನಗೋಸ್ಕರ ಕಾಯುತ್ತಿರುತ್ತಾಳೆ. ಹೊರಡಲೇಬೇಕು" ಎಂದು ಹೊರಟ.

"ಅಬ್ಬಾ" ಎಂದುಕೊಂಡು, ಅವಳು ಅವನ ಹಿಂದೆಯೇ ಆಚೆ ಬಂದಳು. ಏನೋ ಒಂದು ತರಹದ ಸಮಾಧಾನವಾದರೂ, ಏನನ್ನೋ ಮರೆತೆ ಎನ್ನುವ ಅನುಭವವೂ ಆಯಿತು. ತನ್ನ ಮನಸ್ಸಿನ ಅನಿಸಿಕೆಗಳನ್ನು ಅವನೊಡನೆ ಹೇಳಿಕೊಳ್ಳುವಂತಿದ್ದರೇ ಎನಿಸಿದಾಗ ಸಣ್ಣಗೆ ಬೆವತಳು. ಅವಳನ್ನೇ ಗಮನಿಸುತ್ತಿದ್ದವನಿಗೆ ಅವಳ ಅಂತರಂಗ ತಿಳಿಯಿತು. ತನ್ನಲ್ಲೇ ನಕ್ಕ.

ಮೋಹನ, ಮಧುರ ಒಟ್ಟಿಗೇ ಮಾಲತಿಯ ಗಂಡನ ಮನೆ ಒಳಗೆ ಅಡಿ ಇಟ್ಟಾಗ ಎಲ್ಲರೂ ಅವರಿಬ್ಬರನ್ನೇ ನೋಡಿದರು. ಮಾಲತಿ ಮನೋಹರ ಬಂದು ಆದರಣೆಯಿಂದ ಬರಮಾಡಿಕೊಂಡರು. ಭವಾನಮ್ಮ ಒಳಗೆಲ್ಲೋ

ಸೇರಿದ್ದಳು. ಇಬ್ಬರೂ ಒಟ್ಟಿಗೆ ಬಂದುದನ್ನು ನೋಡಲಿಲ್ಲ. ಮಾಲತಿ ಮಾತ್ರ ಕಣ್ಣು ಮಿಟುಕಿಸಿ ನಕ್ಕಿದ್ದಳು. ಮಧುರ ಕೆಂಪಾದಳು. ಮೋಹನ ನಿಂತಲ್ಲಿಂದಲೇ ಯಾರ್‍ಯಾರು ಬಂದಿದ್ದಾರೆಂದು ಗಮನಿಸಿದ. ಕೇಶವನಾಗಲೀ ಇತರ ಸ್ನೇಹಿತರಾಗಲೀ ಇಲ್ಲದುದನ್ನು ಗಮನಿಸಿದ್ದ.

ಸ್ನೇಹಿತೆಯರಿಬ್ಬರೂ ಒಂದೆಡೆ ಕುಳಿತರು. ಪುರೋಹಿತರು, ಶ್ರೀ ಸತ್ಯನಾರಾಯಣ ವ್ರತದ ಮಹಿಮೆಯನ್ನು ಓದುತ್ತಿದ್ದರು. ಮಾಲತಿ ಸ್ನೇಹಿತೆಯ ಕೈ ಹಿಡಿದು, ತನಗೆ ಬೇಕಾದ ವಿಷಯಗಳನ್ನೆಲ್ಲಾ ಕೇಳಿ ತಿಳಿದುಕೊಂಡಳು.

"ನನ್ನ ಮದುವೆಗೆ ನೀನು ಚಕ್ಕರ್ ಹಾಕಿದೆ. ಆದರೆ ನಿನ್ನ ಮದುವೆ ಮಾತ್ರ ನಾನಿಲ್ಲದೇ ನಡೆಯಲ್ಲ ನೋಡು" ಮಧುರ ನಕ್ಕು ಮೋಹನನ ಕಡೆ ನೋಡಿದಳು. ಅವನೂ ಅವಳನ್ನೇ ನೋಡುತ್ತಿದ್ದುದರಿಂದ ಗಲಿಬಿಲಿಗೊಂಡಳು. ಮೋಹನ ಸದ್ದಿಲ್ಲದೇ ನಕ್ಕ.

"ಮೋಹನ ತುಂಬಾ ಸಹಾಯ ಮಾಡಿದರು ಕಣೇ... ಎಷ್ಟು ಥ್ಯಾಂಕ್ಸ್ ಹೇಳಿದರೂ ಸಾಲದು"

"ಅಂತೂ ಬಾಯಿ ಬಿಟ್ಟು ಅವನನ್ನು ಹೊಗಳಿದೆಯಲ್ಲ.... ಅಂದಹಾಗೆ ಮರೆತೇ ಬಿಟ್ಟೆ. ನಿನಗೆ ಅಂತ ಒಂದು ಸ್ನೇಹದ ಉಡುಗೊರೆ ತಂದಿದ್ದೆ. ಮದುವೆಗೆ ನೀನೂ ಬರಲಿಲ್ಲ. ನಾನೂ ಕೊಡಲಿಲ್ಲ. ನಾನು ಮೋಹನನಿಗೆ ಹೇಳ್ತೀನಿ. ಅವನು ತಲುಪಿಸ್ತಾನೆ. ಸೆಲೆಕ್ಷನ್ ಸಹ ಅವನದೇ. ಬೇಡ ಅನ್ನಬೇಡ ಪ್ಲೀಸ್"

ಮಧುರ ತಲೆ ಆಡಿಸಿದಳು.

"ಮಹಾಮಂಗಳಾರತಿ" ಎಂದು ಪುರೋಹಿತರು ನುಡಿದ ಕೂಡಲೇ ಎಲ್ಲರೂ ಮಾತು ನಿಲ್ಲಿಸಿ, ಎದ್ದು ಭಕ್ತಿಯಿಂದ ಕೈ ಮುಗಿದು ನಿಂತರು. ಎಲ್ಲರ ಕೈಗೂ ಹೂ ಮಂತ್ರಾಕ್ಷತೆ ಸಿಕ್ಕಿತು. ವೇದಘೋಷಗಳ ನಡುವೆ, ಗಂಟೆ ಜಾಗಟೆಗಳ ಹಿನ್ನೆಲೆಯಲ್ಲಿ ಮಂಗಳಾರತಿಯನ್ನು ಬೆಳಗಿ, ಎಲ್ಲರ ಮುಂದೆ ಹಿಡಿದರು. ಎಲ್ಲರೂ ಕಣ್ಣಿಗೊತ್ತಿಕೊಂಡರು. ಭವಾನಮ್ಮ ಅವಳ ಹತ್ತಿರ ಬಂದು, "ಈಗ ಬಂದೆಯಾ! ನಿಮ್ಮ ತಂದೆ ಹೇಗಿದ್ದಾರೆ?" ಎಂದು ಕೇಳಿದಳು.

ಮಧುರ ಉತ್ತರಿಸಿದಳು. ಮಾಲತಿಯ ಮದುವೆ ಯಾವ ಅಡಚಣೆಯೂ ಇಲ್ಲದೆ ಮುಗಿದ ಸಂಭ್ರಮವನ್ನು ಆಕೆಯ ಮುಖದಲ್ಲಿ ಗುರುತಿಸಿದಳು. ತನ್ನ ತಾಯಿಯ ಮುಖ ಕಣ್ಣೆದುರಿಗೆ ಬಂದಿತು. ಆಕೆ ಎಂದೂ ಇಷ್ಟು ಸಂಭ್ರಮ

ಪಟ್ಟಿದ್ದನ್ನು ನೋಡಿಯೇ ಇಲ್ಲ ಎಂದುಕೊಂಡಳು.

ಮೊದಲೇ ತನ್ನ ತಾಯಿ ಎಂದೂ ಎಲ್ಲಿಗೂ ಹೆಚ್ಚಿಗೆ ಹೋಗಿ ಬಂದವಳಲ್ಲ. ಈಗ ತಂದೆಯ ಆಕ್ಸಿಡೆಂಟ್‌ನ ನೆವದಲ್ಲಿ ತನ್ನ ಸ್ನೇಹಿತೆಯ ಮದುವೆಗೂ ಬರಲಿಲ್ಲ. ಅವಳಿಗೆ ಯಾವ ಆಸೆಯೂ ಇಲ್ಲವೆ ಎಂದು ಕೊಂಡಾಗ ಅವಳ ಜೀವನದ ದಿನಚರಿ, ತಾನು ಕಂಡಂತೆ, ಒಂದೇ ತರಹ ಇದೆ, ಅದರಲ್ಲಿ ಯಾವ ಉತ್ಸಾಹ, ಯಾವ ಸಂಭ್ರಮವೂ ಇಲ್ಲ. ಬರೀ ನೀರಸ ಎನಿಸಿದಾಗ ಮಧುರಳಲ್ಲಿ ಉದಾಸೀನ ಮೂಡಿತು. ಅದೇ ಪ್ರವೃತ್ತಿಯನ್ನು ತಾನೂ ಮೈಗೂಡಿಸಿಕೊಂಡಿದ್ದೇನೆ ಎಂದು ಕೊಂಡಾಗ, ತಾನು ಹಾಗಿರಬಾರದು, ಭವಾನಮ್ಮನಂತೆ, ಮಾಲತಿಯಂತೆ ಇರುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು ಎಂದು ತನ್ನಲ್ಲೇ ಚಿಂತಿಸಿದಳು. ಔತಣದ ಊಟದ ಕಾರ್ಯಕ್ರಮ ಮುಗಿದ ಮೇಲೆ, ಬಂದಿದ್ದ ನೆಂಟರಿಗೆಲ್ಲ ತಮ್ಮ ಶಕ್ತ್ಯಾನುಸಾರ ಉಡುಗೊರೆಗಳನ್ನು ಕೊಟ್ಟರು. ಇಷ್ಟಾದರೂ, ಅಮೆರಿಕಾದಲ್ಲಿದ್ದ ಮನೋಹರನ ತಮ್ಮ ಮದುವೆಗೆ ಬರಲಾಗಲಿಲ್ಲ. ಮದ್ರಾಸಿನಲ್ಲಿದ್ದ ತಂಗಿಯೂ ಬಂದಿರಲಿಲ್ಲ. ಮಗುವಿಗೆ ಪ್ರಯಾಣ ಮೈಗೆ ಒಗ್ಗುವುದಿಲ್ಲವೆಂದು ಬಂದಿಲ್ಲವೆಂದು ಎಲ್ಲರಿಗೂ ತಿಳಿಸಿದ್ದರು. ಆದರೆ ಕಾರಣ ಅದಲ್ಲ ಎಂದು ಎಲ್ಲರೂ ಊಹಿಸಿದ್ದರು.

ಮನೋಹರನ ತಾಯಿಗೆ ಮಧುರಳನ್ನು ನೋಡಿ, ತನ್ನ ಮಗಳ ನೆನಪಾಗಿ, ಕಣ್ಣೀರು ಒತ್ತಿಕೊಂಡು ಬಂತು.

"ನನ್ನ ಮಗಳು, ಸಣ್ಣ ಮಗುವಿನ ಬಾಣಂತಿ ಅಂತ ಮದುವೆಗೆ ಬರಲಾಗಲಿಲ್ಲ. ಇದೇ ಊರಿನಲ್ಲಿರುವವಳು ನೀನು, ನಿನ್ನ ಸ್ನೇಹಿತೆಯ ಮದುವೆಗೆ ಬರಲಾಗಲಿಲ್ಲ. ಈಗ ಹೇಗಿದ್ದಾರೆ ನಿಮ್ಮ ತಂದೆ?" ಎಂದಾಕೆ ಮಧುರಳನ್ನು ವಿಚಾರಿಸಿ ಕೊಂಡರು.

"ಆಕೆಯ ವಿಶ್ವಾಸಕ್ಕೆ ಮಧುರ ಮಾರುಹೋದಳು. ಮಾಲತಿ ಅದೃಷ್ಟವಂತೆ. ಎಷ್ಟು ಒಳ್ಳೆಯ ಅತ್ತೆ ಸಿಕ್ಕಿದ್ದಾರೆ" ಎಂದುಕೊಂಡು ಆಕೆಯನ್ನು ಭವಾನಮ್ಮನಿಗೆ ಹೋಲಿಸಿದಳು.

ಮಧುರ ಬೇಡ ಬೇಡವೆಂದು ನಿರಾಕರಿಸಿದರೂ, ಬಲವಂತವಾಗಿ ಅವಳಿಗೆ ಸೀರೆಯನ್ನು ಉಡುಗೊರೆಯನ್ನಾಗಿ ಕೊಟ್ಟರು ಮಾಲತಿಯ ಅತ್ತೆ. ಅಲ್ಲೇ ನಿಂತಿದ್ದ ಮನೋಹರ ಸಹ ನುಡಿದ.

"ಪರವಾಗಿಲ್ಲ ತಗೊಳ್ಳಿ. ನೀವೂ ನನ್ನ ತಂಗಿ ಇದ್ದಹಾಗೇ. ಮಾಲತಿಗಂತೂ ಸದಾ ನಿಮ್ಮ ಮಾತೇ...."

ಮನೋಹರನ ಹಾಗೂ ತನ್ನ ಅತ್ತೆಯ ಅಪ್ಪಣೆ ಪಡೆದು, ಮಾಲತಿ ಮಧುರನ ಜತೆಯಲ್ಲಿ ಹೊರಟಳು.

"ಇನ್ನು ಎಷ್ಟು ದಿನಗಳಾಗುತ್ತೊ ಮತ್ತೆ ಭೇಟಿಯಾಗುವುದು, ತುಂಬಾ ಮಾತನಾಡುವುದಿದೆ ಹೋಗಿ ಬರ್ತೀನಿ" ಎಂದಿದ್ದಳು. ಯಾರಿಗೂ ಅದು ಸರಿ ಎನಿಸದಿದ್ದರೂ ಮಾಲತಿ ಹೇಳಿದ್ದರಲ್ಲಿ ನಿಜವೂ ಇದ್ದುದ್ದರಿಂದ ಒಪ್ಪಿಗೆ ಇತ್ತರು.

"ಸಾಯಂಕಾಲ ಬಂದು ಕರೆದುಕೊಂಡು ಬರ್ತೀನಿ. ಅಷ್ಟು ಹೊತ್ತಿಗೆ ಮಾತುಕತೆ ಎಲ್ಲಾ ಮುಗಿಸಿರಬೇಕು" ಮನೋಹರ ಮಡದಿಗೆ ನುಡಿದಾಗ ಒಪ್ಪಿದ್ದಳು.

ಮೋಹನ ಮೊದಲು ಮನೆಗೆ ಬಂದು, ತನ್ನ ಪಾಡಿಗೆ ತಾನು ಮಲಗಿದ್ದ. ತನ್ನ ಹಾಗೂ ಮಾಲತಿಯ ರೂಮಿಗೆ ಮಧ್ಯದಲ್ಲಿ ಇದ್ದ ಬಾಗಿಲನ್ನು ಬೇಕಂತ ಹಾಕಲಿಲ್ಲ. ಸ್ನೇಹಿತೆಯರ ಮಾತನ್ನು ಕೇಳಿಸಿಕೊಳ್ಳುವ ಕೆಟ್ಟ ಆಸೆ ಹುಟ್ಟಿತ್ತು.

ಸ್ನೇಹಿತೆಯರಿಬ್ಬರೂ ಕೆಳದನಿಯಲ್ಲಿ, ಪಿಸುದನಿಯಲ್ಲಿ ಮಾತನಾಡುತ್ತಿದ್ದುದರಿಂದ ಅವನ ಅಸಹನೆ ಹೆಚ್ಚಿತ್ತು. ಕೆದರಿದ ತಲೆ ಕೂದಲಿನೊಡನೆ ಒಳಬಂದ.

"ಜೋರಾಗಿ ಮಾತನಾಡಿದ್ರೆ ನಾನೂ ಕೇಳಿಸಿಕೊಳ್ತೀನಿ. ಇಲ್ಲದಿದ್ರೆ ಮಾತನ್ನೇ ಆಡಬೇಡಿ. ನಾನು ಮಲಗ್ತೀನಿ" ಅವನ ಮುಖ, ಅವನ ಮಾತಿನ ಧಾಟಿ ಕಂಡು ಮಧುರಂಗೆ ನಗು ಬಂತು. ನಕ್ಕಳು.

ಎಷ್ಟು ಮೋಹಕವಾಗಿ ನಗ್ತಾಳೆ ಎಂದುಕೊಂಡ. ತಾನೂ ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತ.

"ಎದ್ದು ಹೋಗೋ, ಹುಡುಗೀರ ಮಧ್ಯೆ ನೀನೇಕೆ?"

"ಏನೇ ಜೋರು ಮಾಡ್ತೀಯಾ? ಮನೋಹರನಿಗೆ ಹೇಳ್ತೀನಿ ತಡಿ"

"ಯಾಕೋ, ನಾನಾಗ್ಲೇ ದೂರ ಆಗಿಬಿಟ್ನಾ ನಿನಗೆ?"

"ಹಾಗೇನಿಲ್ಲ. ಆದರೆ ಹೇಗೂ ಇಲ್ಲಿಂದ ಹೊರಟುಹೋಗ್ತೀಯ, ಆಮೇಲೆ ನೀನು ಮಾತಿಗೆಲ್ಲಿ ಸಿಗ್ತೀಯ? ಇವತ್ತು ಪರ್ಮಿಷನ್‌ತಗೊಂಡು ಬಂದಿದ್ದೀಯ"

ಮಾಲತಿ ಅಳಲು ಪ್ರಾರಂಭಿಸಿದಳು. ಹಿಂದಿನ ದಿನದಿಂದ ತಡೆಹಿಡಿದಿದ್ದ ದುಃಖವೆಲ್ಲಾ ಉಕ್ಕಿ ಉಕ್ಕಿ ಹರಿಯಿತು. ಮೋಹನ ಗಾಭರಿಯಾದ.

"ಏನಾಯ್ತು ಇವಳಿಗೆ? ನಾನೇ ನಂದೆ? ಹೀಗೆ ಅಳ್ತಾಳೆ ಅಂತ ಗೊತ್ತಿದ್ರೆ ಮಾತೇ ಆಡ್ತಿರಲಿಲ್ಲ ನಾನು. ಮಧುರ, ಏನು ಹೀಗೆ ಸುಮ್ಮನೇ ಕೂತುಬಿಟ್ಟೆ? ಸಮಾಧಾನ ಮಾಡು ಅವಳನ್ನ" ಮಧುರ ಕಕ್ಕಾಬಿಕ್ಕಿಯಾಗಿ ನೋಡಿದಳು.

ಕೆಲ ನಿಮಿಷಗಳ ನಂತರ ಮಾಲತಿ ತಾನೇ ಸಮಾಧಾನ ಮಾಡಿಕೊಂಡು, ಇಬ್ಬರ ಕಡೆ ನೋಡಿ ಪೆಚ್ಚುನಗೆ ನಕ್ಕರು.

"ಹುಚ್ಚಿ" ಎನ್ನುತ್ತಾ ಮೋಹನ ಅವಳ ತಲೆ ಸವರಿ, ಅಲ್ಲಿಂದ ತನ್ನ ರೂಮಿಗೆ ಹೊರಟುಹೋದ. ಅವನ ಕಣ್ಣುಗಳೂ ಹನಿಗೂಡಿದ್ದನ್ನು ಇಬ್ಬರೂ ಗಮನಿಸಿದ್ದರು.

ಮಾಲತಿ ಎಷ್ಟು ಪುಣ್ಯವಂತೆ. ಅವಳಿಗಾಗಿ ಮಿಡಿಯುವ ಅಣ್ಣ ಇದ್ದಾನೆ ಎಂದುಕೊಂಡಾಗ, ಕೊರತೆ ಹೆಚ್ಚಾಯಿತು ಎನಿಸಿತು.

ಮೂರುದಿನಗಳ ನಂತರ, ಒಂದು ದಿನದ ಮಟ್ಟಿಗೆ ಎಂದು ಮನೋಹರ ಮಾಲತಿ ಮದ್ರಾಸಿಗೆ ಹೊರಟರು. ಅದೇ ದಿನ ಮಧುರಳ ತಂದೆಗೆ ಆಸ್ಪತ್ರೆಯಿಂದ ಡಿಸ್ಚಾರ್ಜ್‌ಆಯಿತು. ಮೋಹನ ತಾನೇ ಖುದ್ದಾಗಿ ನಿಂತು, ಅಂಬುಲೆನ್ಸ್‌ನಲ್ಲಿ ಅವರನ್ನು ಕ್ಷೇಮವಾಗಿ ಮನೆಗೆ ಕರೆತಂದ. ಒಬ್ಬ ಗಂಡಸಿನ ಅವಶ್ಯಕತೆ ತಮಗೆಷ್ಟು ಇದೆ ಎಂದು ಎಲ್ಲರಿಗೂ ಅರ್ಥವಾಗಿತ್ತು. ಎಲ್ಲರೂ ಗಂಭೀರರಾಗಿದ್ದರು.

ಶೇಷಾದ್ರಿಯಂತೂ ಅವನ ಸಹಾಯವನ್ನು ಬಾಯ್ತುಂಬಾ ಹೊಗಳಿದರು.

"ನಿನ್ನ ಸಹಾಯವಿಲ್ಲದೆ ಇದ್ದಿದ್ದರೆ, ನನ್ನ ಮಕ್ಕಳು ಕಂಗೆಟ್ಟು ಹೋಗುತ್ತಿದ್ದರು. ದೇವರು ನಿನ್ನನ್ನು ಚೆನ್ನಾಗಿಟ್ಟರಲಿ" ಹಾರೈಸಿದ್ದರು.

"ಇದೆಲ್ಲಾ ಏನು ಮಹಾ? ನಾವು ಮನುಷ್ಯರಾಗಿ ಹುಟ್ಟಿದಮೇಲೆ ಒಬ್ಬರಿಗೊಬ್ಬರು ಸಹಾಯ ಮಾಡಲೇಬೇಕು." ತತ್ವಜ್ಞಾನಿಯಂತೆ ನುಡಿದಿದ್ದ ಮೋಹನ.

"ಹೌದಪ್ಪ..... ನೀನು ತುಂಬಾ ತಿಳುವಳಿಕಸ್ಥ" ಮತ್ತೆ ಹೊಗಳಿದ್ದರು ಆತ. ಅವರ ಹೊಗಳಿಕೆಯ ನುಡಿಗಳಿಂದ ಮೋಹನ ಉಬ್ಬಿ ಹೋಗಿದ್ದ.

'ಆತ ತನ್ನನ್ನು ಮೆಚ್ಚಿದ್ದಾರೆ. ತನಗಷ್ಟು ಸಾಕು' ಎಂದುಕೊಂಡ.

ಮಾಲತಿ ಮದ್ರಾಸಿನಿಂದ ಬಂದವಳು. ಸಾಯಂಕಾಲದ ಹೊತ್ತಿಗೆ ತಾಯಿಯ ಮನೆಗೆ ಬಂದಳು. ಮನೋಹರ ಅವಳನ್ನು ಅಲ್ಲಿ ಬಿಟ್ಟು ರಿಸರ್ವೇಶನ್ ಕನ್‌ಫರ್ಮ್ ಆಗಿದೆಯೋ ಇಲ್ಲವೋ ತಿಳಿದುಬರಲು ರೈಲ್ವೆ ಸ್ಟೇಷನ್‌ಗೆ ಹೋದ. ಮಾಲತಿ ಮದ್ರಾಸಿನ ವಿಷಯವನ್ನೆಲ್ಲಾ ಮಾತಾಡಿದಳು. ಮೋಹನನೂ ಮನೆಯಲ್ಲೇ ಇದ್ದ.

"ಅಮ್ಮ..... ಮನೋಹರನ ತಂಗಿ ಎಷ್ಟು ಚೆನ್ನಾಗಿದ್ದಾಳೆ ಅಂತೀಯ. ಮಧುರ ಅವಳ ಮುಂದೆ ಏನು ಇಲ್ಲ. ಆದರೆ ಯಾಕೋ ಮಂಕಾಗಿದ್ದಾಳೆ

ಅಂತನ್ನಿಸುತ್ತೆ. ಮನೋಹರ ಸಹ ಹಾಗೇ ಅಂದರು, ಅವಳು ಸುಖವಾಗಿಲ್ಲ ಅಂತ"

"ಅವಳ ಗಂಡನ ಮನೆಯವರು ಮನಬಿಚ್ಚಿ ಮಾತನಾಡುವುದೇ ಇಲ್ಲ. ಅವರೆಲ್ಲಾ ತಮಿಳಲ್ಲೇ ಮಾತನಾಡುವುದು. ಕೋಕಿಲ ಒಬ್ಬಳೇ ಕನ್ನಡದಲ್ಲಿ ಮಾತನಾಡುವುದು. ಅವಳಿಗೂ ಏನೋ ಹಠ ಅಂತ ಕಾಣಿಸುತ್ತೆ. ಅಪ್ಪ ಅಮ್ಮನ ಮನೆಗೆಬರುವ ವಿಚಾರವನ್ನೇ ಮಾತಾಡಲಿಲ್ಲ. ನನಗಂತೂ ವ್ಯಸನವಾಯ್ತು"

"ನೀನಗ್ಯಾಕೆ ಅದೆಲ್ಲ ಬಿಡು. ಅವರವರಲ್ಲಿ ಏನು ಮಾತುಕತೆ ನಡೆದಿದೆಯೋ? ಹೊಸದಾಗಿ ಹೋದವಳು, ಸದ್ಯದಲ್ಲೇ ಕಲ್ಕತ್ತಾಕ್ಕೆ ಹೋಗ್ತೀಯಾ, ಇದನ್ನೆಲ್ಲ ಹಚ್ಚಿಕೋ ಬೇಡ" ಎಂದು ಬುದ್ಧಿವಾದ ಹೇಳಿದರು ಭವಾನಮ್ಮ.

"ಯಾಕಮ್ಮ.... ಇವಳು ಆ ಮನೆ ಸೇರಿದ ಮೇಲೆ. ಆ ಮನೆಯವರ ಬಗ್ಗೆ ಚಿಂತಿಸಿದರೆ ತಪ್ಪೇನು?" ಮೋಹನ ಮಧ್ಯೆ ಪ್ರಶ್ನಿಸಿದ್ದ.

"ನಿನಗೆ ಅರ್ಥವಾಗೋಲ್ಲ ಬಿಡು."

"ಯಾಕೆ ಅರ್ಥವಾಗುಲ್ಲ? ಸದಾ ಹೀಗೇ ಹೇಳ್ತೀಯಾ..... ನಾವೇನೂ ಚಿಕ್ಕವರಲ್ಲ. ಓದಿ ಬರೆದು, ತಿಳುವಳಿಕೆ ಪಡೆದವರು, ಯಾವುದು ತಪ್ಪು, ಯಾವುದು ಸರಿ, ಅಂತ ತಿಳಿದು ಸಲಹೆ ನೀಡಿದರೆ ತಪ್ಪೇನಿಲ್ಲ" ಎಂದ ಮೋಹನ.

"ಈಗೇನೂ ಯಾರೂ ಇವಳನ್ನು ಕೇಳಿಲ್ಲವಲ್ಲ. ನೀನು ಸರಿ ಮಾಡ್ತೀನಿ ಅಂತ ಹೋಗಬೇಡ ಮಾರಾಯ....."

"ಸದಾ, ಬರೀ ನಾವು ನಮ್ಮದು ಅಂತ ಇದ್ದರೆ ಅದೇನು ಚೆನ್ನ? ನಾವು ಇನ್ನೊಬ್ಬರಿಗಾಗಿಯೂ ಬದುಕಬೇಕಾಗುತ್ತದೆ ಕೆಲವು ಸಲ"

"ಸಾಕು ನಿನ್ನ ಉಪದೇಶ. ನನಗದೆಲ್ಲ ಬೇಕಿಲ್ಲ."

"ಹೋಗಲಿ ಬಿಡೋ.... ಮನೋಹರ ಬಂದರೆ ತಕ್ಷಣ ಹೊರಟು ಬಿಡಬೇಕಾಗುತ್ತೆ ಮೊದಲು ಮಾತನ್ನು ಆಡಿ ಮುಗಿಸ್ತೀನಿ" ಮೋಹನ ಬೇಸರದಿಂದ ಎದ್ದುಹೋದ.

"ಈ ನಡುವೆ ಇವನೂ ಎಷ್ಟು ಬದಲಾಯಿಸಿ ಹೋಗಿದ್ದಾನೆ ಗೊತ್ತಾ?"

"ಅವನಿಗೂ ಮದುವೆ ಮಾಡು. ಸರಿ ಹೋಗ್ತಾನೆ"

"ನಾನೂ ಅದನ್ನೇ ಯೋಚಿಸಿದ್ದೆ. ನೀನು ಇಲ್ಲದ ಮನೆ ಭಣ ಭಣ ಅಂತಿದೆ. ನಿನ್ನ ಜಾಗ ತುಂಬಲು ಸೊಸೆ ಬಂದರೆ ಹೇಗೆ ಅಂತ"

"ಆದರೆ ಒಂದು ಮಾತು. ಅವನಿಗೆ ಇಷ್ಟವಾಗುವ ಹುಡುಗಿಯನ್ನೇ ನೀನೂ ಒಪ್ಪಬೇಕು. ಯಾವ ರೀತಿಯಿಂದಲೂ ಅವನಿಗೆ ಬಲವಂತ ಮಾಡಬಾರದು"

"ಯಾಕೆ! ನನ್ನ ಮಾತಿಗೆ ಬೆಲೆ ಇಲ್ಲವೆ?"

"ಮಾತನಾಡಿ ನಿನ್ನ ಬೆಲೆ ಕಳೆದು ಕೊಳ್ಳಬೇಡಮ್ಮಾ.... ಅವನಿಗಿಷ್ಟವಾದ ಹುಡುಗಿಯನ್ನು ಒಪ್ಪಿದರೆ, ಅವನೂ ಸುಖವಾಗಿರ್ತಾನೆ."

"ಅವನು ಸುಖವಾಗಿರಲಿ ಅಂತ ನನಗೇನು ಆಸೆ ಇಲ್ಲವೆ?"

"ಹಾಗಲ್ಲಮ್ಮಾ.... ನಿನ್ನ ಅನಿಸಿಕೆಗಳೇ ಬೇರೆ. ಅವನ ಚಿಂತನೆಗಳೇ ಬೆರೆ. ಯಾರಾದ್ರೂ ಒಬ್ಬರು ಬಿಟ್ಟು ಕೊಡಬೇಕಲ್ವೆ?"

"ಚೆನ್ನಾಗಿದೆ. ನೆನ್ನೆ ಮೊನ್ನೆ ಮದುವೆ ಆದವಳು. ನನಗೆ ತಿಳುವಳಿಕೆ ಹೇಳ್ತೀಯಲ್ಲಾ. ಇದೇ ಮಾತನ್ನು ನಿನ್ನ ಅತ್ತೆ ಎದುರಿಗೆ ಆಡೀಯಾ? ಕೆಟ್ಟ ಹುಡುಗಿ ಅಂತ ಅನ್ನಿಸ್ಕೋತೀಯ ಅಷ್ಟೇ....."

"ಅವರು ಅಂತಹವರು ಅಂತ ಅನ್ನಿಸುವುದಿಲ್ಲ"

"ಸರಿ. ನಿಮ್ಮತ್ತೆ ಒಳ್ಳೆಯವರು: ನಾನು ಕೆಟ್ಟವಳು. ಅಲ್ವೆ? ಹುಟ್ಟಿ ಬೆಳೆದು, ಈಗ ಪರರ ಮನೆಗೆ ಹೋಗಿ ನನ್ನನ್ನೇ ಅಂತೀಯಲ್ಲ"

"ನಿನ್ನನ್ನು ಅನ್ನುತ್ತಿಲ್ಲಮ್ಮಾ. ಇರೋ ವಿಷಯ ಹೇಳಿದೆ. ಅವರೇನಾದರೂ ಕೆಟ್ಟದ್ದು ಮಾಡಿದ್ರೆ ಅದನ್ನೂ ಹೇಳ್ತೀನಿ ತಿಳೀತಾ!"

"ಕೆಟ್ಟವರೋ ಒಳ್ಳೆಯವರೋ, ಅದು ನಿನ್ನ ಮನೆ. ಯಾವ ಮಾತಿಗೂ ಬಾಯಿ ಹಾಕದೇ ತೆಪ್ಪಗಿರುವುದನ್ನು ಮೊದಲು ಕಲಿ" ಮಾತು ಮುಂದುವರೆಸಲು ಇಚ್ಛಿಸದವಳಂತೆ ಒಳಗೆದ್ದು ಹೊರಟಳು ಭವಾನಮ್ಮ.

ತಾಯಿಯ ವಿಚಿತ್ರ ವರ್ತನೆಗೆ ಮಾಲತಿ ಮರುಗಿದಳು.

ಮನೋಹರ ಮಾಲತಿಯೊಡನೆ ಹೇಳಿದ್ದ. "ಹನಿಮೂನ್ ಅಂತ ಇಲ್ಲಿಂದ ಎಲ್ಲಾದರೂ ಹೊರಗೆ ಹೋಗುವುದು ನನಗಿಷ್ಟವಿಲ್ಲ. ಇಲ್ಲೂ ನಮ್ಮ ಮನೆಯಲ್ಲೂ ನಮಗೆ ಡಿಸ್ಟರ್ಬ್ ಮಾಡುವವರು ಯಾರೂ ಇಲ್ಲ. ಹದಿನೈದು ದಿನಗಳ ನಂತರ ಕಲ್ಕತ್ತಾಕ್ಕೆ ವಾಪಸ್ಸು ಹೊರಡಲೇ ಬೇಕಾಗುತ್ತೆ. ಮತ್ತೆ ಮತ್ತೆ ತಕ್ಷಣಕ್ಕೆ ಬರಲು ಆಗುವುದಿಲ್ಲ.... ಏನು ಹೇಳ್ತೀಯಾ?"

ಮಾಲತಿ ಒಪ್ಪಲೇಬೇಕಾಯ್ತು. ಮದುವೆಯಾದ ಹೊಸದಿನಗಳು ಗಂಡನೊಡನೆ ಅಲ್ಲಿ ಇಲ್ಲಿ ತಿರುಗಾಡುವ ಬಯಕೆಯಾಗಿದ್ದರೂ, ಕೆಲವೇ ದಿನಗಳ ನಂತರ ಹೇಗೂ ಪ್ರಯಾಣ ಮಾಡಬೇಕಲ್ಲ ಎಂದು ಸುಮ್ಮನಾದಳು.

ಹೊಸದಾಗಿ ಸಂಸಾರ ಹೂಡುವ ಮಗಳಿಗೆ ಬೇಕಾದುದನ್ನೆಲ್ಲ, ಮಗಳು ಕೇಳದಿದ್ದರೂ ಭವಾನಮ್ಮ ತಯಾರಿಸಲು ಶುರು ಮಾಡಿದಳು. ಬಗೆಬಗೆಯ ಪುಡಿಗಳು, ಹಪ್ಪಳ ಸಂಡಿಗೆ ಇತ್ಯಾದಿಗಳನ್ನೆಲ್ಲ ಕಟ್ಟಿಟ್ಟಳು.

"ಎಲ್ಲಾ ಊರಿನಲ್ಲಿಯೂ, ಎಲ್ಲಾ ಪದಾರ್ಥಗಳೂ ಸಿಗುತ್ತವೆ. ಸುಮ್ಮನೇ ಎಲ್ಲಾ ಹೊತ್ತುಕೊಂಡು ಹೋಗುವುದು ಬೇಡ ಅಂತ ಮನೋಹರ ಮೊದಲೇ ಹೇಳಿದ್ದರೂ ನೀನೇಕೆ ಎಲ್ಲಾ ಮಾಡುವುದಕ್ಕೆ ಶುರುಮಾಡ್ದೆ?" ಮಾಲತಿ ಆಕ್ಷೇಪಿಸಿದಳು.

"ಸಿಗುತ್ತೆ, ಎಲ್ಲಾ ಹಳೇದು. ಹೊಸದಾಗಿ ಮಾಡಿಕೊಡ್ತೀನಿ. ನಾಲ್ಕು ದಿನವಾದರೂ ಚೆನ್ನಾಗಿ ಅಡಿಗೆ ಮಾಡಿಕೊಂಡು ತಿನ್ನಿ"

"ನನಗೆ ಚೆನ್ನಾಗಿ ಅಡಿಗೆ ಮಾಡಕ್ಕೆ ಬರುಲ್ಲವಲ್ಲಮ್ಮ"

"ಎಷ್ಟು ಬಗೇಲಿ ಹೇಳಿದೆ. ಎಲ್ಲಾ ಕಲಿತ್ಕೊಳ್ಳೇ ಅಂತ. ಸುಮ್ಮನೇ ಆ ಹುಡುಗಿ ಮನೆಗೆ ಅಲೆದೂ ಅಲೆದೂ ಸಮಯ ಕಳೆದೆ ನೀನು...."

"ಅವಳಿಗೆ ಎಲ್ಲಾ ಬರುತ್ತಲ್ಲಾ....."

"ಅವಳು ಜಾಣೆ. ತಾಯಿಯ ಮಾತನ್ನು ಮೀರಲ್ಲ."

"ಅಬ್ಬಾ, ಅಂತೂ ಅವಳು ಜಾಣೆ ಅಂತ ಒಪ್ಪಿಕೊಂಡೆಯಲ್ಲ"

"ಗುಣಕ್ಕೆ ಮತ್ಸರವೇ ಅಂತ. ಜಾಣರನ್ನು ಜಾಣರು ಅಂತ ಹೊಗಳುಕ್ಕೆ ಏನು ಶ್ರಮ ಪಡಬೇಕು. ನೀನೂ ಹಾಗೇ ಇದ್ದಿದ್ದರೇ...."

"ಇರಲಿ ಬಿಡಮ್ಮ. ಒಬ್ಬೊಬ್ಬರು ಒಂದೊಂದು ತರಹ ಇರ್ತಾರೆ. ಅವರಮ್ಮನ ತರಹ ನೀನಿಲ್ಲ. ನಿನ್ನ ತರಹ ಅವರಿಲ್ಲ"

"ಆಕೆಗೆ ಜಂಭ ಜಾಸ್ತಿ" ಎಂದಳು ಭವಾನಮ್ಮ, ಮಾಲತಿ ಆ ಮಾತಿಗೆ ನಕ್ಕಳು.

"ಅವರಿಗಲ್ಲ ಜಂಭ, ನಿನಗೆ" ಎಂದು ಹೇಳಬೇಕೆಂದುಕೊಂಡವಳು ಏಕೋ ಏನೋ ಸುಮ್ಮನಾದಳು.

ಒಂದುಕಾಲದಲ್ಲಿ ತಮ್ಮ ನೆರೆಯವರಾಗಿದ್ದವರು, ಒಬ್ಬರ ಸಹಾಯಕ್ಕೆ ಇನ್ನೊಬ್ಬರು ಒದಗುತ್ತಿದ್ದವರು. ಈಗ ಅಮ್ಮ ಸ್ವಂತ ಮನೆಗೆ ಬಂದು, ಅನುಕೂಲವಾದ ಸ್ಥಿತಿಗೆ ಬಂದಿರುವವಳು ಹೀಗೆ ಮಾತನಾಡ್ತಾಳಲ್ಲ ಎನಿಸಿ ಬೇಜಾರಾಗಿತ್ತು. ಆದರೆ ಸುಮ್ಮನೇ ವಾದ ಮಾಡಿ ಪ್ರಯೋಜನ ವಿಲ್ಲವೆಂದು ಅರಿತಿದ್ದಳು.

ಆ ದಿನ ಬಂದವಳು. ಮೊದಲು ಮೋಹನನನ್ನು ಭೇಟಿಯಾಗಿ, ನಿನ್ನ

ಹತ್ತಿರ ಮುಖ್ಯವಾದ ವಿಷಯ ಮಾತನಾಡಬೇಕಾಗಿತ್ತು ಎಂದಳು. ಅವನೂ ಒಪ್ಪಿದ. ಆದರೆ ಆ ಮಾತುಗಳನ್ನು ಮನೋಹರನ ಎದುರಿಗೆ ಆಡುವಂತಿರಲಿಲ್ಲ. ಅವನೋ ಹೆಂಡತಿಯ ಹಿಂದೆ ಸದಾ ಇರುತ್ತಿದ್ದ. ಕಡೆಗೆ ಯೋಚಿಸಿ ಹೇಳಿದಳು.

"ನನಗೆ ಸ್ವಲ್ಪ ಷಾಪಿಂಗ್ ಕೆಲಸವಿದೆ. ನಾನು ಮೋಹನನ ಜತೆಯಲ್ಲಿ ಹೋಗ್ತೀನಿ. ನಿಮಗೆ ಷಾಪಿಂಗ್ ಅಂದರೆ ಬೇಜಾರು ತಾನೆ?"

ಅವನಿಗೆ, ಅಂಗಡಿ ಮುಂದೆ ಕಾಯುತ್ತಾ ನಿಲ್ಲುವುದೆಂದರೆ ಬೇಜಾರಿನ ಕೆಲಸ. ಸಧ್ಯ ನನ್ನನ್ನು ಕರೆಯಲಿಲ್ಲವಲ್ಲ ಎಂದುಕೊಂಡು, "ಬೇಗ ಬಂದುಬಿಡು" ಎಂದು ಹೇಳಿದ. ಅವನು ಮನೆಗೆ ವಾಪಸ್ಸು ಹೊರಟ. ಇವರಿಬ್ಬರೂ ಕಾಂಪ್ಲೆಕ್ಸ್ ಕಡೆ ಹೊರಟರು.

ಷಾಪಿಂಗ್‌ಗಿಂತ ಮಾತು ಮುಖ್ಯವಾಗಿತ್ತು. ಒಂದು ರೆಸ್ಟುರಾಗೆ ಹೋದರು.

ಮನೆಯಲ್ಲಿ ಕಾಫಿ ತಂಡಿ ಮುಗಿದಿದ್ದರೂ, ತಂಗಿಯ ಮಾತಿಗೆ ಇಲ್ಲವೆನ್ನಲಾಗದೇ ಒಳ ನಡೆದ. ಫ್ಯಾಮಿಲಿ ರೂಮಿನಲ್ಲಿ ಕುಳಿತನಂತರ ಮಾಲತಿ ಮಾತಿಗೆ ಪ್ರಾರಂಭಿಸಿದಳು.

"ಮೋನ, ನಾನೊಂದು ಮಾತು ಕೇಳ್ತೀನಿ. ಇಲ್ಲ ಎನ್ನಬಾರದು....."

"ಹುಂ. ನೋಡೋಣ, ಏನದು!"

"ನೋಡೋಣ ಅಲ್ಲ. ನೀನೀಗ ಹುಂ ಅನ್ನದಿದ್ದರೆ ಅದನ್ನು ಕಳೆದುಕೊಳ್ತಿಯ ಅಷ್ಟೇ....."

"ಅಂಥಹ ವಸ್ತು ಯಾವುದಪ್ಪಾ?" ಗೇಲಿ ಮಾಡಿದ.

"ಹೌದು, ಅಮೂಲ್ಯವಾದದ್ದು......."

"ಹಾಗಾದರೆ ನಾನೇಕೆ ಬೇಡ ಅನ್ನಲಿ? ಹುಂ. ಹೇಳು...."

"ನೀನು ಮಧುರಳನ್ನ ಆದಷ್ಟು ಬೇಗ ಮದುವೆಯಾಗಬೇಕು."

"ಅಂ....! ಯಾಕೆ?" ಎಂದು ಗಾಬರಿಯಿಂದ.

"ಯಾಕೇ ಅಂದ್ರೆ.... ನೀನು ಒಪ್ಪದಿದ್ದರೆ ಅವಳನ್ನು ಬೇರೆ ಯಾರಾದರೂ ಹಾರಿಸಿಕೊಂಡು ಹೋಗ್ತಾರೆ ಅಷ್ಟೇ...."

"ಇದ್ದಕ್ಕಿದ್ದಂತೆ ಈ ಮಾತೇಕೆ ಬಂತು! ಅದೂ ಅರ್ಜೆಂಟಾಗಿ?"

"ನೆನ್ನೆದಿನ ಕೇಶವ ಬಂದಿದ್ದ. ಅವನು ಏನು ಹೇಳಿದನೋ, ಮನೋಹರ ಮಧುರಳ ಬಗ್ಗೆ ವಿಚಾರಿಸಿದಾಗ, ನಾನು ಹಿಂದೆ ಮುಂದೆ ನೋಡದೇ ಅವಳ ಮದುವೆ ಗೊತ್ತಾಗಿದೆ ಎಂದು ಹೇಳಿಬಿಟ್ಟೆ"

"ಛೆ! ಹಾಗೇಕೆ ಸುಳ್ಳು ಹೇಳಿದೆ? ಅವಳಿಗೆಲ್ಲಿ ಗೊತ್ತಾಗಿದೆ?"

"ಯಾಕೋ ಅವಳು ಕೇಶವನ ಮಡದಿಯಾಗುವುದನ್ನು ನಾನು ಊಹಿಸಿಕೊಳ್ಳಲೂ ಅಸಾಧ್ಯವಾಯಿತು. ಆದರೆ ವರ ಯಾರೂಂತ ಕೇಳಲಿಲ್ಲ ಸಧ್ಯ"

"ಛೆ! ಎಂತಹ ಪರಿಸ್ಥಿತಿ ತಂದಿಟ್ಟು ಬಿಟ್ಟೆಯಲ್ಲ"

"ಹಾಗಾದರೆ, ನೀನು ಅವಳನ್ನು ಪ್ರೀತಿಸುತ್ತಿಲ್ಲವೆ!"

"ಹಾಗಂತ ನಾನ್ಯಾವಾಗ ನಿನಗೆ ಹೇಳಿದ್ದೆ?"

"ಅವಳಿಗೋಸ್ಕರವೇ, ನೀನು ಅಷ್ಟು ಓಡಾಡಿ ಅವರುಗಳಿಗೆ ಸಹಾಯ ಮಾಡಿದೆ ಅಂತ ಅಂದ್ಕೊಂಡಿದ್ದೆ ನಾನು"

"ಹಾಗಾದ್ರೆ ಎಲ್ಲರೂ ಈ ತರಹದ ಭಾವನೆಗಳನ್ನಿಟ್ಟುಕೊಂಡು, ಒಬ್ಬರಿಗೊಬ್ಬರು ಸಹಾಯ ಮಾಡ್ತಾರಾ!"

"ಇಲ್ಲ. ಆದರೂ.... ಹೋಗಲಿ ಮಧುರನ್ನ ಒಪ್ಪದೇ ಇರುವುದಕ್ಕೆ ಏನಾದರೂ ಕಾರಣವಿದೆಯಾ?"

"ಒಪ್ಪಿಲ್ಲ ಅಂತ ನಾನೆಲ್ಲಿ ಹೇಳಿದೆ! ಇದ್ದಕ್ಕಿದ್ದಂತೆ ನಿರ್ಧರಿಸುವ ವಿಷಯವಲ್ಲ ಇದು. ಅವಳೂ ಒಪ್ಪಬೇಡವೆ? ಅವಳ ಮನಸ್ಸಿನಲ್ಲಿ ಏನಿದೆಯೋ?"

"ನಿನ್ನನ್ನು ಒಪ್ಪದಿರುವಂಥಾದ್ದು ಏನಿದೆ! ನಾನು ಒಪ್ಪಿಸ್ತೀನಿ ಅವಳನ್ನು"

"ಬೇಡ, ಬಲವಂತ ಮಾತ್ರ ಮಾಡಬೇಡ"

"ಸಮಜಾಯಿಸಿ ಹೇಳ್ತೀನಿ"

"ನನ್ನನ್ನ, ಅವಳನ್ನು ಒಪ್ಪಿಸಬಹುದು. ಆದರೆ ಅಮ್ಮನ್ನ? ಅವಳನ್ನ ಹೇಗೆ ಒಪ್ಪಿಸ್ತೀಯಾ?" ಒಂಥರಾ ನಗುತ್ತಾ ಕೇಳಿದ್ದ.

"ಅದೇ ಕಷ್ಟ ಆದರೆ ನೀನು ಹುಂ ಎಂದರೆ, ಇಬ್ಬರೂ ಸೇರಿ ಅವಳನ್ನು ಒಪ್ಪಿಸಬಹುದು."

"ನಾಟಕ ಗೀಟಕ ಬೇಡಮ್ಮ. ಸಧ್ಯ ಬೇಜಾರು"

"ಅವಳಾಗಿಯೇ ಮಧುನ್ನ ಒಪ್ಪುವವರೆಗೂ ಕಾಯಬೇಕು. ಅದಕ್ಕೆ ಉಪಾಯವನ್ನು ಹುಡುಕಬೇಕು. ಆದರೆ ನೀನೇ ನಿರ್ಧಾರವನ್ನು ತಿಳಿಸಿಲ್ಲವಲ್ಲ"

"ನಾನು ಹುಂ ಅಂದರೆ ಆಯಿತೆ! ಅವಳು, ನೀನು ಬೇಡ, ನಾನು ಕೇಶವನ್ನೇ ಮದುವೆಯಾಗ್ತೀನಿ ಎಂದರೆ?" ಕಿರುನಗೆ ನಗುತ್ತಾ ಪ್ರಶ್ನಿಸಿದ್ದ.

"ಆ ಕೇಶವನ ಕಣ್ಣುಗಳನ್ನು ಕಿತ್ತು ಬಿಡುವಷ್ಟು ರೋಷ ಇತ್ತು ನಿನಗೆ" ಮಾಲತಿ ನಕ್ಕಾಗ, ಅವನೂ ನಕ್ಕ.

"ಅವನೊಬ್ಬ ಶುದ್ಧಾ ಹಲ್ಕಾ. ಏನೂ ತಿಳಿಯದ ರಾಗಿಣೀನ ಏನೇನೋ ಕೇಳಿದ್ದಾನೆ. ಅಂತಹವನು ಈ ಮನೋಹರನಿಗೆ ಹೇಗೆ ಸ್ನೇಹಿತನೋ?"

"ನನಗೂ ಅದೇ ಆಶ್ಚರ್ಯ. ಮನೋಹರ್ ಅಂತೂ ಅವನನ್ನು ತುಂಬಾ ಹೊಗಳುತ್ತಾರೆ. ಅವನ ಸಲಹೆ ಇಲ್ಲದೇ ಏನೂ ಮಾಡುವುದಿಲ್ಲ. ಈಗ ಅವನ ಮದುವೆಗೆ ಮುಂದೆ ಬಂದಿದ್ದಾರೆ. ಅವನೊಬ್ಬ ಗೂಳಿ ತರಹ. ತಂದೆ ತಾಯಿ ಯಾರೂ ಇಲ್ಲ. ಕೊಳೆತು ಹೋಗುವಷ್ಟು ಆಸ್ತಿ ಇದೆಯಂತೆ. ಕಾರು ಮನೆ ಎಲ್ಲಾ ಇದೆ. ರೂಪವತಿ ಹುಡುಗೀನ ಹುಡುಕ್ತಿದ್ದನಂತೆ. ಮಧುರ ಕಣ್ಣಿಗೆ ಬಿದ್ದಾಗಿನಿಂದ ಅವಳ ಜಪವೇ ಅಂತೆ....."

"ಹಾಗಾದರೆ ಅವನಿಗೆ ಬುದ್ಧಿಕಲಿಸಲೇಬೇಕು.... ಆದರೆ ಮಧುರ ಏನನ್ನುತ್ತಾಳೋ?"

"ಅವಳಿಗೆ ನಿನ್ನ ಮೇಲೆ ನಂಬಿಕೆ ಮೆಚ್ಚಿಗೆ ಎಲ್ಲಾ ಇದೆ. ಖಂಡಿತಾ ಬೇಡವೆನ್ನುವುದಿಲ್ಲ. ಅವಳಿಗೆ ನಿನ್ನಂತಹ ಗಂಡನಿಂದ ರಕ್ಷಣೆಯೂ ಬೇಕು. ಒಂದು ಸಲ ಏನು ಹೇಳಿದ್ದಳು ಗೊತ್ತಾ" ನಿನಗಿರುವಂತಹ ಅಣ್ಣ ನನಗೂ ಇದ್ದಿದ್ದರೇ ಎಂದಿದ್ದಳು.

"ನೋಡಿದ್ಯಾ! ಅವಳ ಮನಸ್ನಲ್ಲಿ ಏನಿದೆಯೋ?"

"ಅದಕ್ಕೆ ನಾನೇನು ಹೇಳಿದ್ದೆ ಗೊತ್ತಾ? ನನಗೆ ಮಾತ್ರ ಅಂತಹ ಅಣ್ಣ, ನಿನಗೆ ಅಂತಹ ಗಂಡ ಸಿಗಲಿ ಅಂತ ಹಾರೈಸಿದ್ದೆ."

"ಆ ಹಾರೈಕೆ ಫಲಿಸುವ ದಿನ ಹತ್ತಿರ ಬರುತ್ತಿದೆ ಎನ್ನು ಹಾಗಾದ್ರೆ"

"ನಿಜ ಹೇಳು ಮೋನ.... ನೀನು ಅವಳನ್ನು ಪ್ರೀತಿಸ್ತಿಲ್ವಾ?"

"ಇನ್ನು ಮೇಲೆ ಆ ವಿಷಯ ಯೋಚಿಸಬೇಕು. ಒಂದು ಕೆಲಸ ಮಾಡು. ನೀನೀಗಲೇ ಹೋಗಿ, ಅವಳ ಮನಸ್ನಲ್ಲಿ ಏನಂತ ತಿಳಿಕೋ...."

"ನನಗೀಗ ಅಷ್ಟು ಫ್ರೀಡಂ ಎಲ್ಲಿದೆ? ನನಗಾಗಿ ಮನೋಹರ ಬಂದು ಕಾಯುತ್ತಿರಬಹುದು."

"ಷಾಪಿಂಗ್..... ಕೆಲಸ? ಹೋಗಲಿ ಬೇಗ ಐಸ್‌ಕ್ರೀಂನ್ನು ಮುಗಿಸು ಕರಗೇ ಹೋಯ್ತು" ಎಂದ ಮೋಹನ್. ಇಬ್ಬರೂ ಕರಗಿ ನೀರಾಗಿದ್ದ ಐಸ್‌ಕ್ರೀಂನ್ನು ಕುಡಿದು, ಬಿಲ್ ಪೇ ಮಾಡಿ ಹೊರಬಿದ್ದರು.

"ಒಂದು ಕೆಲಸ ಮಾಡು, ನನ್ನನ್ನ ಮನೆ ಹತ್ತಿರ ಇಳಿಸಿ, ನೀನು ಮಧುರಳ ಮನೆಗೆ ಹೋಗಿ, ನಾನು ಕರೆದೆ ಅಂತ ಹೇಳಿ ಅವಳನ್ನು ಹೊರಗೆಲ್ಲಾದರೂ ಕರೆದುಕೊಂಡು ಹೋಗಿ ಮಾತನಾಡಿ, ಅವಳ ಅಭಿಪ್ರಾಯ

ತಿಳಿದುಕೋ" ಸಲಹೆ ಇತ್ತಳು ಮಾಲತಿ.

"ಅವಳು ಮನೆಯಲ್ಲಿ ಇಲ್ಲದಿದ್ದರೇ...."

"ಇಲ್ಲದಿದ್ದರೇ, ಬರದಿದ್ದರೇ, ಒಪ್ಪದಿದ್ದರೇ..... ಅಂತ ನೀನೇ ಹೇಳಬೇಡ, 'ಜೈ ಭಜರಂಗ ಬಲಿ' ಅಂತ ಹೊರಡು......"

"ಭಜರಂಗಬಲಿ ಬ್ರಹ್ಮಚಾರಿ ಕಣೇ....."

"ತಾನು ಬ್ರಹ್ಮಚಾರಿಯಾದರೂ, ನಿನ್ನನ್ನು ಬ್ರಹ್ಮಚಾರಿಯಾಗಿರು ಅಂತ ಅವನೇನೂ ಹೇಳುವುದಿಲ್ಲ. ಪಾಪ, ನೀನೂ ಮದುವೆಯಾಗು ಅಂತ ಹೇಳಮ ಅಕ್ಕತಂಗಿಯರು ಯಾರೂ ಇರಲಿಲ್ಲವೇನೋ ಅವನಿಗೆ"

"ಚೆನ್ನಾಗಿದೆ. ನಿನ್ನಕತೆ. ಹೊಸ ಸೃಷ್ಟಿ"

"ಅದು ಹೊಸ ಸೃಷ್ಟಿಯಲ್ಲ. ಈಗ ನಿನ್ನ ಕತೆ ಸೃಷ್ಟಿಯಾಗಲೇಬೇಕಾಗಿದೆ. ಗೆದ್ದರೆ ನಿನಗೇ ಲಾಭ"

"ಹಾಗಾದರೆ ಮಧುರಂಗೆ ಅಷ್ಟು ಮೌಲ್ಯವಿದೆಯೆ?"

"ನಿನಗೂ ಅದೇ ಮೌಲ್ಯ ಇದೆ. ಅದಕ್ಕೇ ನನ್ನ ಈ ಸಂಧಾನ"

"ನನ್ನ ಹತ್ತಿರ ಇಷ್ಟು ಹೊತ್ತು ಕೊರೆದಿದ್ದನ್ನ ನೀನು ಮಧುರಳ ಹತ್ತಿರವೇ ಏಕೆ ಕೊರೆಯಬಾರದಾಗಿತ್ತು?" ಎಂದು ಮೋಹನ ಕೇಳಿದಾಗ ಮಾಲತಿ ಒಂದುಗಳಿಗೆ ತಡೆದಳು.

"ಅವಳು ನಿನ್ನ ಹಂಡತಿಯಾಗಿ ನಮ್ಮ ಮನೆಗೆ ಬರಬೇಕು. ನೀನು ಗಂಡನಾಗಿ ಅವಳ ಮನೆಗೆ ಹೋಗಬೇಕಾಗಿಲ್ಲ"

"ನಾನು ಅವಳ ಗಂಡನಾದ ಮೇಲೆ ಅವರ ಮನೆಗೆ ಹೋಗಲೇಬೇಕಾಗುತ್ತದೆ. ಅವರಿಗೆ ಬೇರೆ ಯಾರೂ ಗಂಡು ಮಕ್ಕಳಿಲ್ಲ"

"ಅಳಿಯನಾಗದೆಯೂ ನೀನು ಆ ಕೆಲಸಗಳನ್ನು ಮಾಡಿದೀಯ. ಇಷ್ಟೆಲ್ಲಾ ನೀನು ಆಡುತ್ತಿರುವುದನ್ನು ನೋಡಿದರೆ, ನನಗೆ ನಿನ್ನ ಮೇಲೆ ಅನುಮಾನ ಬರ್ತಿದೆ."

"ಏನಂತ?....."

"ನೀನು ನಾಟಕ ಆಡ್ತಿದೀಯ ಅಂತ"

"ಏನಿಲ್ಲ" ಎಂದು ಹೇಳಿದರೂ, ಅವನಿಗೆ ಒಂದು ತರಹ ಖುಷಿಯಾಗಿತ್ತು.

ಮಾಲತಿಯನ್ನು ಮನೆಯ ಹತ್ತಿರ ಇಳಿಸಿ, ಮತ್ತೆ ಮಧುರಳ ಮನೆ ಕಡೆಗೆ ಹೊರಟ. ವಾರದಲ್ಲಿ ಒಂದೆರಡು ಸಲ, ತಾನಾಗಿಯೇ ಬಂದು ಶೇಷಾದ್ರಿಯ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದುದರಿಂದ ಯಾರಿಗೂ

ಅನುಮಾನವಿರಲಿಲ್ಲ.

"ಮಾಲತಿ ಹೇಳಿ ಕಳಿಸಿದ್ದಾಳೆ. ಬರಬೇಕಂತೆ" ಎಂದ ಅವಳ ಕಡೆ ತಿರುಗಿ.

"ಅವಳೇ ಬರಬಹುದಾಗಿತ್ತಲ್ಲ" ಎಂದಳು ತಂದೆಯ ಕಡೆ ನೋಡಿ.

"ಊರಿಗೆ ಹೊರಡಲು ಸಿದ್ಧತೆ ಮಾಡಿಕೊಳ್ತಾ ಇದ್ದಾಳೆ. ಹಾಗೇ ಮಾತನಾಡುತ್ತಾ ಜತೆಗೆ ಹೆಲ್ಪ್ ಬೇಕು ಅಂತ ಕಾಣುತ್ತೆ...."

ಅವನು ತಡವರಿಸಿದಾಗ, ಅವಳು ಅನುಮಾನದಿಂದ ಅವನನ್ನು ನೋಡಿದಳು. ಅವನು ಮುಗುಳ್ನಕ್ಕ.

"ನಾನು ಬರಲಿ ಅಂತ ಇವನಿಗೂ ಆಸೆ" ಎಂದು ಕೊಂಡಳು ಮನದಲ್ಲಿ.

"ಹೋಗಿ ಬಾಮ್ಮ. ಆ ಹುಡುಗಿಯೂ ಊರಿಗೆ ಹೊರಟುಬಿಡ್ತಾಳೆ." ತಂದೆ ನುಡಿದಾಗ ಅವನೊಡನೆ ಹೊರಟಳು.

ರಸ್ತೆಯ ತಿರುವಿನಲ್ಲಿ ಇದ್ದಕ್ಕಿದ್ದಂತೆ ಸ್ಕೂಟರನ್ನು ನಿಲ್ಲಿಸಿದ.

"ಈಗಲೇ ಒಂದು ವಿಷಯ ಇತ್ಯರ್ಥವಾಗಬೇಕು. ಆಮೇಲೆ ಸುಳ್ಳು ಹೇಳಿದೆ ಅಂತ ಅಂದ್ಕೋಬೇಡ. ನಿನ್ನನ್ನು ಒಂದು ಮಾತು ಕೇಳಬೇಕು"

ಅವಳಿಗೆ ಗಾಭರಿಯಾಯಿತು. "ಏನದು?" ಕೇಳಿದಳು.

"ಮನೋಹರನ ಸ್ನೇಹಿತ ಕೇಶವ ಅಂತ ಒಬ್ಬನಿದ್ದಾನೆ. ತುಂಬಾ ಶ್ರೀಮಂತ ನಂತೆ. ಅವನು ನಿನ್ನನ್ನು ಇಷ್ಟಪಟ್ಟಿದ್ದಾನಂತೆ. ನಿನಗೆ ಒಪ್ಪಿಗೆ ಇದ್ದರೆ ತಿಳಿಸು. ನಾನು ನಿಂತು ಮದುವೆ ನಡೆಸಿಕೊಡ್ತೀನಿ"

ಕತ್ತಲೆಯಲ್ಲಿ ಅವನ ಮುಖ ಕಾಣಲಿಲ್ಲ. ಅವನಿಗೆ ಉತ್ತರಿಸದೇ ಬಂದ ದಾರಿಯಲ್ಲಿ ಹಿಂತಿರುಗಿ ನಡೆಯಲಾರಂಭಿಸಿದಳು.

ಅವನು ಸ್ಕೂಟರ್ ಸ್ಟ್ಯಾಂಡ್ ಹಾಕಿನಿಲ್ಲಿಸಿ. ಅವಳ ಹಿಂದೆ ಓಡಿ ಬಂದು ಅವಳ ಕೈ ಹಿಡಿದು ನಿಲ್ಲಿಸಿದ. ಅವಳು ಕೈ ಕೊಸರಿಕೊಂಡಳು.

"ಏನಾಯ್ತು ಅಂತ ಸಿಟ್ಟು ಮಾಡ್ಕೋತಿದೀಯಾ? ಇಷ್ಟವಿಲ್ಲದಿದ್ದರೆ ಹಾಗೆ ಹೇಳಿದರೆ ಆಗುಲ್ವೆ?" ಎಂದ ಮೋಹನ್. ಮಧುರ ಮಾತನಾಡಲಿಲ್ಲ. ಅವನು ಮತ್ತೆ ಪ್ರಶ್ನಿಸಿದ.

"ಇಷ್ಟವಿಲ್ಲ ಅಂತ ಅಂದರೆ ಯಾಕೆ ಏನು ಎತ್ತ ಅಂತ ನೂರೆಂಟು ಪ್ರಶ್ನೆ ಗಳನ್ನು ಕೇಳಿ ಒಪ್ಪಿಸಲು ಪ್ರಯತ್ನಿಸ್ತೀರಿ." ಎನ್ನುತ್ತಾ ಅವನ ಕಡೆ ತಿರುಗಿದಳು ಮಧುರ.

"ಬಲವಂತವೇನಿಲ್ಲ. ಆದರೆ ಒಪ್ಪದಿರಲು ಕಾರಣವೂ ಇರಬೇಕಲ್ಲವೆ!"

"ಕಾರಣ ಏನೂಂತ ಈಗಲೇ ಹೇಳುಕ್ಕೆ ಆಗಲ್ಲ"

"ಹಾಗಾದ್ರೆ ನಾನು ಮಾಲತಿಗೆ ಏನು ಹೇಳಲಿ?"

"ನಿಜವಾಗಿಯೂ ಮಾಲತಿ ನಿಮ್ಮನ್ನು ಕಳಿಸಿದಾಳಾ? ಹಾಗಾದರೆ ನಡೀರಿ. ನಾನೇ ಅವಳ ಹತ್ತಿರ ಮಾತಾಡ್ತೀನಿ"

"ಅವಳು ಗಂಡನ ಜತೆ ಹೊರಟು ಹೋದಳು ತನ್ನ ಮನೆಗೆ"

"'ಹಾಗಾದರೆ ನಡು ಬೀದಿಯಲ್ಲಿ ಇತ್ಯರ್ಥವಾಗಬೇಕೆ?'

"ಹಾಗಲ್ಲ. ನಿನ್ನ ಮನಸ್ಸಲ್ಲಿ ಏನಿದೆ ಅಂತ ತಿಳಿದುಕೊಳ್ಳೋಕ್ಕೆ ಕೇಳಿದೆ. ನಿನ್ನ ಅಥವಾ ನನ್ನ ಮನೆಯವರ ಎದುರಿಗೆ ನಿನ್ನನ್ನು ಹೀಗೆ ಪ್ರಶ್ನಿಸೋಕ್ಕೆ ಆಗುತ್ತಾ?"

"ಹಾಗಾದರೆ ಎರಡು ದಿನದ ಅವಕಾಶ ಕೊಡಿ. ಯೋಚಿಸಿ ಹೇಳ್ತೀನಿ"

"ಎರಡು ದಿನ? ಒಂದು ರಾತ್ರಿ ಸಾಲದೆ ಯೋಚಿಸೋಕ್ಕೆ!"

"ಯೋಚಿಸುವುದಕ್ಕೆ ಬೇಕಾದಷ್ಟು ವಿಷಯಗಳಿವೆ. ಒಂದು ರಾತ್ರಿ ಸಾಲದು"

"ಹಾಗಾದ್ರೆ, ಈ ರಾತ್ರಿ ನನಗೆ ನಿದ್ದೆಯಿಲ್ಲ.... ನಾನೂ ಒಂದು ತೀರ್ಮಾನಕ್ಕೆ ಬರಬೇಕಾಗಿದೆ" ಎಂದು ಅವಳಿಗೆ ಸವಾಲು ಹಾಕುವವನಂತೆ ನುಡಿದ. ಮೋಹನ, "ಹುಂ, ನಡೀ ನಿನ್ನನ್ನು ನಿನ್ನ ಮನೆಗೆ ಬಿಟ್ಟು ಬರ್ತೀನಿ" ಎಂದ.

"ಇಷ್ಟುಬೇಗ? ಅಪ್ಪಕೇಳಿದ್ರೆ ಏನು ಹೇಳಲಿ?"

"ಸುಳ್ಳು ಹೇಳುವುದನ್ನೂ ನಾನು ಹೇಳಿ ಕೊಡಬೇಕಾ?"

ಅವನ ಮಾತಿಗೆ ಗಕ್ಕನೆ ನಿಂತಳು. "ಸುಮ್ಮನೆ ತಮಾಷೆ ಮಾಡಿದೆ. ಏನೋ ಒಂದು ಹೇಳದರಾಯ್ತು" ಎಂದ ಮೋಹನ.

"ಅದು ಅಷ್ಟು ಸುಲಭವಲ್ಲ" ಎಂದಳು. ತನಗೆ ತಾನೇ ಹೇಳವಂತೆ.

"ಹಾಗಾದರೆ ಬಾ. ಇಲ್ಲೇ ಹತ್ತಿರದಲ್ಲಿ ಒಂದು ದೇವಸ್ಥಾನವಿದೆ. ಪ್ರದಕ್ಷಿಣೆ ಹಾಕಿ, ಪುಣ್ಯವನ್ನು ಕಟ್ಟಿಕೊಳ್ಳೋಣ"

ಮಧುರ ನಕ್ಕರೂ, ಅವನ ಜತೆ ಬಂದಳು. ಏನೋ ಅಪರಾಧಿಭಾವ..... ಅವರು ಅಲ್ಲಿಗೆ ಬರುವಹೊತ್ತಿಗೆ ಮಂಗಳಾರತಿಯ ಸಮಯವಾಗಿತ್ತು. ತೀರ್ಥಪ್ರಸಾದ ಪಡೆದು ದೇವರಲ್ಲಿ ಬೇಡಿಕೊಂಡ. ತಾನು ಏನು ಬೇಡಿದೆನೋ ಅದನ್ನೇ ಅವಳೂ ಬೇಡಿರುತ್ತಾಳೆಂದು ಊಹಿಸಿ, ಅವಳ ಕಡೆ ನೋಡಿದ. ಅವಳು ಅವನನ್ನೇ ನೋಡುತ್ತಾ ಇದ್ದವಳು ಮುಗುಳ್ನಕ್ಕಳು.

ಅವಳನ್ನು ಅವಳ ಮನೆ ಹತ್ತಿರ ಇಳಿಸಿ ಹಾಗೇ ಹೊರಟುಹೋದ. ಮಾಲತಿ ಮನೋಹರನ ಜತೆ ಹೊರಟುಹೋಗಿದ್ದಳು. ಇವನು ತನ್ನ

ರೂಮಿಗೆ ಹೋಗಿ ಸೇರಿಕೊಂಡ.

ಆ ರಾತ್ರಿ ಮೋಹನ ಚೆನ್ನಾಗಿ ನಿದ್ರಿಸಿದ. ಆದರೆ ಮಧುರಳಿಗೆ ನಿದ್ದೆ ಇಲ್ಲ. ಹೊರಳಾಡಿ ಹೊರಳಾಡಿ ಏನೇನೋ ಚಿಂತಿಸಿದಳು.

"ಮೋಹನ ತನ್ನನ್ನು ಪ್ರೀತಿಸುತ್ತಿದ್ದಾನೆಂದು ನಂಬಿದ್ದಳು ಮಧುರ. ಆದರೆ ಅವನು ಈ ಸುಳಿವನ್ನೇ ಕೊಡದೆ, ಕೇಶವನ ವಿಷಯ ಎತ್ತಿ ತನ್ನನ್ನು ಕೆಣಕಿದ್ದ. ನೇರವಾಗಿ ತನ್ನ ಮನಸ್ಸಿಲ್ಲಿದ್ದುದ್ದನ್ನು ಹೇಳಿದ್ದರೆ ತಾನೂ ಹೇಳಬಹುದಾಗಿತ್ತು. ಅವನನ್ನು ಕಂಡೊಡನೆ ನನ್ನ ಹೃದಯ ಅರಳುವುದನ್ನು ನಾನು ಪ್ರೀತಿ ಎಂದೆ ಭಾವಿಸಿದ್ದೇನೆ. ಆದರೆ ಅವನು? ತಾನು ಪ್ರೀತಿಸುತ್ತಿದ್ದೇನೆಂದು ತಿಳಿಸದೇ, ಕೇಶವನ ಜತೆ ಮದುವೆ ಮಾಡಿಸುವ ಜವಾಬ್ದಾರಿ ತನ್ನದು ಅಂದನಲ್ಲ. ತಾನೊಪ್ಪಿದರೆ ನಿಜವಾಗಿಯೂ ಅವನು ಮದುವೆ ಮಾಡಿಸಿದರೆ? ತಾನೇಕೆ ಎರುಡು ದಿನಗಳ ವಾಯಿದೆ ಕೇಳಿದೆ! ಈ ಎರಡು ದಿನಗಳಲ್ಲಿ ಏನೇನು ಅನಾಹುತಗಳು ಬೇಕಾದರೂ ನಡೆದುಹೋಗಬಹುದು. ನಾಳೆಯೇ ಕೇಶವನ್ನ ಕರೆದುಕೊಂಡು ಬಂದುಬಿಟ್ಟರೆ? ತನ್ನ ತಂದೆ ಒಪ್ಪಿಬಿಟ್ಟರೇ.... ಸುನಾಯಾಸವಾಗಿ ಒಬ್ಬ ಮಗಳ ಮದುವೆ ನಡೆಯುವುದಾದರೆ ಯಾವ ತಂದೆ ತಾಯಿ ತಾನೇ ಒಪ್ಪುವುದಿಲ? ಆಗ ತಾನೇನು ಮಾಡಲು ಸಾಧ್ಯ? ತಾನು ತನಗೆ ಒಪ್ಪಿಗೆ ಇಲ್ಲ ಎಂದು ಹೇಳಿಬಿಡಬೇಕಾಗಿತ್ತು. ನನ್ನ ಬಗ್ಗೆ ಏನೆಂದುಕೊಂಡನೋ ಏನೋ, ಕೇಶವನ ಶ್ರೀಮಂತಿಕೆ ಮರುಳಾಗಿದೀನಿ ಅಂತ ಅಂದುಕೊಂಡರೆ! ಮೋಹನ ತನ್ನ ಮನಸ್ಸಿನಲ್ಲಿ ಏನಿದೆ ಅಂತ ಹೇಳದೇನೇ ಸುಮ್ಮನಾಗಿಬಿಟ್ಟರೇ.... ಆದರೆ ನಾನ್ಹೇಗೇ ನಾನು ಹೇಗೆ ಹೇಳಲಿ? ನನ್ನನ್ನು ಒಂದು ಮಾತು, ನೀನು ಪ್ರೀತಿಸ್ತೀಯಾ ಅಂತ ಕೇಳಿದರೆ ಹೂಂ ಎಂದು ಬಿಡುತ್ತಿದ್ದೆ. ಆದರೆ ಅವನೇಕೆ ಕೇಳಲಿಲ್ಲ. ನನ್ನ ಮೇಲೆ ಮನಸ್ಸಿಲ್ಲವೆ? ಆದರೆ ಹಾಗೆನ್ನಿಸುವುದಿಲ್ಲ. ನನಗೋಸ್ಕರವೇ ಈ ಸಹಾಯಗಳನ್ನು ಮಾಡ್ತಿದ್ದಾನೆ ಎಂದು ಕೊಂಡಿದ್ದೆ. ಏನೇ ಆಗಲಿ, ಅವನಾಗಿಯೇ ಕೇಳದೇ ನಾನು ಏನನ್ನು ಹೇಳುವುದಿಲ್ಲ. ನಾನೂ ಸತಾಯಿಸ್ತೀನಿ" ಹೀಗೆ ಮನಸ್ಸಿನಲ್ಲೇ ಮಧುರ ಹಲವುಬಗೆ ಚಿಂತಿಸಿದಳು. ತಳಮಳ, ಆತಂಕಗಳಿಂದ ತೊಳಲಾಡಿದಳು. ಪಕ್ಕದಲ್ಲಿ ಮಲಗಿದ್ದ ರಾಗಿಣಿ ಸುಖನಿದ್ರೆಯಲ್ಲಿದ್ದುದನ್ನು ಕಂಡು ಅಸೂಯೆ ಮೂಡಿತು. ಮನಸ್ಸಿಗೆ ನೆಮ್ಮದಿ ತಂದು ಕೊಳ್ಳಲು ಎದ್ದು ಕೂತು, ಸಂಗೀತಾಭ್ಯಾಸ ಮಾಡುವ ಮನಸ್ಸಾಯಿತು. ಆದರೆ ಸಮಯ? ಇನ್ನೂ ಎರಡು ಗಂಟೆ. ಅಕ್ಕಪಕ್ಕದವರು ನಕ್ಕಾರು

ಎಂದುಕೊಂಡು ಮಲಗಿ ನಿದ್ರಿಸಲು ಯತ್ನಿಸಿದಳು.

ಎರಡು ದಿನಗಳ ಅವಧಿ ಕಳೆದರೂ ಮೋಹನ ಅವಳನ್ನು ಆ ಬಗ್ಗೆ ಮತ್ತೆ ವಿಚಾರಿಸಲಿಲ್ಲ. "ತನ್ನನ್ನು ಪರೀಕ್ಷಿಸಲು ಈ ರೀತಿ ನಾಟಕ ಆಡಿದ್ದಾನೆ" ಎಂದು ಕೊಂಡಾಗ ಮಧುರಳಿಗೆ ಕೋಪ ಬಂತು ಮಾಲತಿಯಾದರೂ ಮುಂಚಿನಂತೆ ಸಿಕ್ಕಿದ್ದರೆ ತಾನಾಗಿಯೇ ಎಲ್ಲಾ ತಿಳಿಸಿರುತ್ತಿದ್ದಳು ಎಂದು ಚಿಂತಿಸಿದಳು.

ಈ ಕೇಶವ ಯಾರು? ನಿಜವಾಗಿಯೂ ತನ್ನನ್ನ ಮೆಚ್ಚಿದ್ದಾನೆಯೇ? ಅದರ ರಹಸ್ಯ ತಿಳಿದೇ ಬಿಡಬೇಕೆಂಬ ಉತ್ಸಾಹ ಮೂಡಿತು. ಸಮಾನ್ಯವಾಗಿ ಮಾಲತಿ ತನ್ನ ತಾಯಿಯ ಮನೆಗೆ ಬರುತ್ತಿದ್ದುದು ಸಾಯಂಕಾಲದ ಹೊತ್ತಿನಲ್ಲಿ. ಆ ಹೋತ್ತಿಗೆ ತಾನು ಹೋಗಿ ಅವಳ ಹತ್ತಿರ ಮಾತನಾಡಿ ಏನು ವಿಷಯ ಅಂತ ತಿಳಿದುಕೊಳ್ಳಬೇಕು ಎಂದುಕೊಂಡಳು. ಮೋಹನ ಈ ಪ್ರಸ್ತಾಪ ಮಾಡುವ ಮುನ್ನ ತನ್ನ ಪಾಡಿಗೆ ತಾನು ಹಾಯಾಗಿದ್ದೆ. ಈ ತಳಮಳವೆಲ್ಲ ಯಾಕೋ ಎಂದುಕೊಂಡರೂ ಒಂದು ವಿಷಯ ಇತ್ಯರ್ಥವಾಗಬೇಕಾಗಿತ್ತು.

ಮಧುರ ಬಂದಾಗ, ಮಾಲತಿ ಇನ್ನೂ ಬಂದಿರಲಿಲ್ಲ. ಮೋಹನನೂ ಆಫೀಸಿನಿಂದ ಬಂದಿರಲಿಲ್ಲ. ಭವಾನಮ್ಮನೊಡನೆ ಸಲುಗೆಯಿಂದ ಮಾತನಾಡಿ ಅಭ್ಯಾಸವಿಲ್ಲದಿದ್ದರೂ, ಅಲ್ಲಿ ಏನಾದರೂ ಮಾತನಾಡಲೇ ಬೇಕಾಗಿತ್ತು. ಅಲ್ಲಿಯೇ ಕುಳಿತಿದ್ದ ಮಾಲತಿಯ ತಂದೆ ವಿಶ್ವಾಸವಾಗಿ ಮಾತನಾಡಿಸಿದಾಗ, ಅವಳಿಗೆ ಹಾಯೆನ್ನಿಸಿತ್ತು. ತಂದೆಯ ಕುಶಲವನ್ನು ಕೇಳಿ ತಿಳಿದುಕೊಂಡರು ಆತ.

"ಸಂಗೀತ ಪಾಠ ಎಲ್ಲಿವರೆಗೆ ಬಂದಿದೆ." ಆತ ಇದ್ದಕ್ಕಿದ್ದಂತೆ ಕೇಳಿದಾಗ ಅವಳಿಗೆ ಸಂತೋಷವೂ ಆಯಿತು. ನಾಚಿಕೆಯೂ ಆಯಿತು.

"ಚೆನ್ನಾಗಿ ನಡೀತಿದೆ. ಸೀನಿಯರ್ ಆಯ್ತು. ವಿದ್ವತ್ತಿನ ಪಾಠಕ್ಕೆ ಹೋಗಬೇಕು ಇನ್ನು ಮುಂದೆ"

"ಗುಡ್ ಮುಂದುವರೆಸು.... ಅಭ್ಯಾಸ ಮಾತ್ರ ನಿಲ್ಲಿಸಬೇಡಮ್ಮ. ಸರಸ್ವತಿ ಹಾಗೆಲ್ಲಾ ಸುಲಭವಾಗಿ ಎಲ್ಲರಿಗೂ ಒಲಿಯುವವಳಲ್ಲ. ನಿನಗೆ ಒಲಿದಿದ್ದಾಳೆ ನೀನು ಅವಳನ್ನು ಆರಾಧಿಸಬೇಕು"

ಅವರ ಶ್ಲಾಘನೆಯ ಮಾತು, ಪ್ರೋತ್ಸಾಹದ ನುಡಿ ಅವಳಿಗೆ ಮೆಚ್ಚಿಗೆ ಯಾದವು.

"ನಾನು ಇಷ್ಟೊತ್ತಿನಲ್ಲಿ ಮನೆಯಲ್ಲಿರುವುದೇ ಅಪರೂಪ. ಮಾಲತಿ ಬರ್ತಾಳೆನೋ ಅಂತ ಕಾಯ್ತಾ ಇದೀನಿ. ಬೇಜಾರಾಗ್ತಿದೆ. ಒಂದೆರಡು

ದೇವರ ನಾಮ ಹಾಡ್ತೀಯೇನಮ್ಮ..... ” ಎಂದರು ಆತ.

ಆತನ ಕೋರಿಕೆಗೆ ಇಲ್ಲವೆನ್ನಲೂ ಆಗದು, ಉಹೂಂ ಎಂದು ನಿರಾಕರಿಸಲೂ ಆಗದಿರುವ ಪರಿಸ್ಥಿತಿ. ಪೆಚ್ಚಾಗಿ ಅವರನ್ನೇ ನೋಡಿದಳು.

“ನಿನ್ನ ಹಾಡನ್ನು ಕೇಳುವ ಅವಕಾಶವೇ ಒದಗಿರಲಿಲ್ಲ ನನಗೆ. ತ್ಯಾಗರಾಜರ ಪಂಚರತ್ನ ಕೀರ್ತನೆಯೊಂದನ್ನು ಹೇಳಿಬಿಡಮ್ಮಾ ” ಎಂದು ಆತ ತಾನೇ ಸೂಚಿಸಿದಾಗ ಅವಳಿಗೆ ಏನು ಹೇಳಬೇಕೆಂದು ತೋಚದೇ ಚಡಪಡಿಸಿದಳು.

“ಲೇ ಭವಾನಿ ತಂಬೂರಿ ತಗೊಂಡು ಬಾ. ಶ್ರುತಿ ಮಾಡಿ ಎಷ್ಟು ದಿನಗಳಾಗಿದೆಯೋ ಏನೋ.....”

ಗಂಡನ ಮಾತಿಗೆ ಎದುರಾಡದೆ ಭವಾನಮ್ಮ ತಂಬೂರಿಯನ್ನು ತಂದಿತ್ತಳು. ಮಧುರ ಚಾಪೆಯ ಮೇಲೆ ಕುಳಿತು, ಶ್ರುತಿಯನ್ನು ಸರಿಪಡಿಸಿಕೊಂಡು ತಂತಿಯನ್ನು ಮೀಟಿ ನಾದರ ಝೇಂಕಾರವನ್ನು ತುಂಬಿದಳು. ಆ ನಾದಕ್ಕೆ ತನ್ನ ಸ್ವರವನ್ನು ಸೇರಿಸಿ, ಎಂದರೋ ಮಹಾನುಭಾವುಲು.... ಹಾಡತೊಡಗಿದಳು. ತನ್ಮಯತೆಯಿಂದ ಅವಳು ಹಾಡುತ್ತಿದ್ದಂತೆಯೇ ಭವಾನಮ್ಮ ಸಹ ತನ್ನ ಕೆಲಸವನ್ನು ಬಿಟ್ಟು ಬಂದು ಕುಳಿತಳು.

ಅಂಗಳಕ್ಕೆ ಕಾಲಿಡುತ್ತಿರುವಂತೆಯೇ ಮೋಹನನಿಗೆ, ಆ ಮೋಹಕ ಗಾನದ ಲಹರಿ ತಲುಪಿತ್ತು. ಹಾಗೆಯೇ ಅಲ್ಲೆ ಮೆಟ್ಟಿಲ ಬಳಿ ನಿಂತ. ಹಾಡುತ್ತಿರುವವಳು ಮಾಲತಿ ಅಲ್ಲ ಎನ್ನುವುದು ಖಚಿತವಾಗಿತ್ತು. ರಾಗಿಣಿಯೂ ಅಲ್ಲ. ತಾಳಮೇಳ ವಿಲ್ಲದಿರುವುದರಿಂದ ರೇಡಿಯೋ ಹಾಡಲ್ಲ. ಯಾರಿರಬಹುದು? ಕುತೂಹಲದಿಂದ ಅವನ ಕಿವಿಗಳು ಚುರುಕಾದವು. ಎಷ್ಟೋ ನಿಮಿಷಗಳ ನಂತರ ಕೀರ್ತನೆ ಮುಕ್ತಾಯಗೊಂಡಾಗ, ತಂದೆ “ಭೇಷ್ ಭೇಷ್” ಎಂದದ್ದು ಕೇಳಿಸಿತು. ಇನ್ನೊಂದೇ ಒಂದು, ಯಾವುದಾದರೂ ದೇವರ ನಾಮ ಹಾಡು... ಅಷ್ಟರಲ್ಲಿ ಮಾಲತಿಲಯೂ ಬರಬಹುದು ಎಂದು ಅವರು ಹೇಳಿದ್ದು ಕೇಳಿಸಿತು ಮೋಹನನಿಗೆ.

ಹಾಗಾದರೆ ಮಾಲತಿಯ ಸ್ನೇಹಿತೆ..... ಯಾರಿರಬಹುದು! ಮಧುರ? ಅವನ ಎದೆ ಬಡಿತ ಜೋರಾಯಿತು. ಈಗ ತನ್ನ ನೆರಳು ಬಿದ್ದರೂ, ಅವಳು ಹಾಡುವುದನ್ನು ನಿಲ್ಲಿಸಿ ಬಿಡ್ತಾಳೆ ಎಂದುಕೊಂಡು ಹಾಗೇ ನಿಂತ.

“ಮೆಲ್ಲಮೆಲ್ಲನೆ ಬಂದನೇ.....”

ಪುರಂದರದಾಸರ ಕೀರ್ತನೆ ಪ್ರಾರಂಭಿಸಿದಾಗ ಅದು ತನಗಾಗಿಯೇ ಹೇಳುತ್ತಿರುವಳೇನೋ ಎಂಬಂತೆ ಸಂಭ್ರಮಗೊಂಡ.

ಹಾಡುವುದು ಮುಗಿದಾಗ, ತಂಬೂರಿಯ ನಾದವೂ ನಿಂತಿತು.

"ತುಂಬಾ ಸಂತೋಷನಮ್ಮ.... ಈ ಮುದುಕನ ಮಾತಿಗೆ ಬೆಲೆ ಕೊಟ್ಟು ಹಾಡಿದೆಯಲ್ಲ" ಎಂದು ತಂದೆ ನುಡಿದಾಗ ಅವಳ ದನಿಗಾಗಿ ಕಾತರಿಸಿದ. ಆದರೆ ಅವಳು ಏನನ್ನು ಹೇಳಲಿಲ್ಲ. ಒಂದೆರಡು ಕ್ಷಣ ತಡೆದವನು. ಸೀದಾ ಒಳಗೆ ನುಗ್ಗಿದ. ಚಾಪೆಯ ಮೇಲೆ ಕುಳಿತಿದ್ದ ಮಧುರನ್ನ ಕಂಡ.

"ಅರೇ ಮಧುರ ನೀನು..... ಎಂದ ಏನು ಅರಿಯದವನಂತೆ"

"ನಮ್ಮ ಮಾಲತಿಗಿಂತ ಚೆನ್ನಾಗಿ ಹಾಡ್ತಾಳಯ್ಯ. ಐದು ನಿಮಿಷ ಮುಂಚೆ ಬಂದಿದ್ದರೇ, ನಿನಗೂ ಸುಧೆಯ ಲಭ್ಯವಿರುತ್ತಿತ್ತು."

"ಈಗೇನಂತೆ! ಈಗಲೂ ಒಂದೆರಡು ಹಾಡು ಹೇಳಲಿ" ಎನ್ನುತ್ತಾ ತಾನೂ ಅಲ್ಲೇ ಚಾಪೆಯ ಮೇಲೆ ಕೂಡಲು ನೋಡಿದ. ಅದು ಭವಾನಮ್ಮನಿಗೆ ಸರಿ ಎನಿಸಲಿಲ್ಲ.

"ಆಫೀಸಿನಿಂದ ಸುಸ್ತಾಗಿ ಬಂದಿದೀಯ. ಮೊದಲು ಕೈಕಾಲು ಮುಖ ತೊಳೆದು ತಿಂಡಿ ಕಾಫಿ ತಿಂದು ಆಯಾಸ ಪರಿಹಾರ ಮಾಡ್ಕೋ. ಹಾಡು ಎಲ್ಲೂ ಓಡಿಹೋಗೋಲ್ಲ."

ಮುಖಕ್ಕೆ ಹೊಡೆದಂತೆ ಭವಾನಮ್ಮ ನುಡಿದಾಗ, ಮಧುರಳಿಗಿಂತ ಹೆಚ್ಚಾಗಿ ಅವನಿಗೇ ಅವಮಾನವಾದಂತಾಗಿತ್ತು. ಮಧುರಳ ಕಡೆ ನೋಡಲು ಧೈರ್ಯ ಬರಲಿಲ್ಲ.

"ಅದೇಕೆ ಹಾಗಾಡ್ತೀ.... ಸಂಗೀತ ಎಂದರೆ ಹಾಗೇ, ಹಾಗಿರುತ್ತೆ ಆಕರ್ಷಣೆ. ನೀನೇ ಈಗತಾನೇ ಎಲ್ಲಾ ಕೆಲಸಬಿಟ್ಟು ಬಂದು ಇಲ್ಲಿ ನಿಂತಿದ್ದೆ" ತಂದೆ ನುಡಿದಾಗ ಅವನು ಅಪ್ಪನನ್ನು ಮೆಚ್ಚುಗೆಯಿಂದ ನೋಡಿದ. ತಾಯಿ ಬೇಕೂಂತ ಹೀಗಾಡ್ತಿದ್ದಾಳೆ ಎಂದುಕೊಂಡು, ರೇಗಿಸಿದ.

"ಅಮ್ಮ, ಮಧುರಳಿಗೆ ಕಾಫಿ ತಂಡಿ ಕೊಟ್ಯಾ?"

"ನನಗೆ ಬೇಡ. ಎಲ್ಲಾ ಆಗಿದೆ" ಎಂದಳು.

"ಪ್ಲೀಸ್, ನನಗೋಸ್ಕರ" ಎಂದ ತಾಯಿಗೆ ಕೇಳಿಸದಂತೆ. ಭವಾನಮ್ಮನ ಒರಟು ಮಾತಿನಿಂದ ಸ್ತಬ್ಧಗೊಂಡಿದ್ದ ಅವಳ ನರನಾಡಿಗಳು ಅವನ ಮಾತಿನಿಂದ ಚೇತನಗೊಂಡವು. ನಿನಗೋಸ್ಕರ ಏನನ್ನಾದರೂ ಸಹಿಸಬಲ್ಲೆ ಎನ್ನುವಂತೆ ಮುಗುಳ್ನಕ್ಕಳು. ಅಷ್ಟರಲ್ಲಿ ಮಾಲತೀ ಮನೋಹರ ಸಹ ಬಂದರು.

ತನ್ನ ಸ್ನೇಹಿತೆ ಅಲ್ಲಿ ಕುಳಿತಿರುವುದನ್ನು ನೋಡಿ ಮಾಲತಿ, ಮೋಹನನ ಕಡೆ ಪ್ರಶ್ನಾರ್ಥವಾಗಿ ನೋಡಿದಳು. ಮೋಹನ ಬೇರೆ ಕಡೆ ನೋಡಿದ.

ಮಗಳೊಂದಿಗೆ ಮಾಲತಿಯ ತಂದೆ ಮತ್ತೆ ಮತ್ತೆ ಮಧುರಳ ಸಂಗೀತವನ್ನು ಹೊಗಳಿದ್ದೇ ಹೊಗಳಿದ್ದು. ಮಾಲತಿಗೆ ಅಸೂಯೆ ಎನಿಸಲಿಲ್ಲ. ಸ್ನೇಹಿತೆಗೆ ಸಿಕ್ಕ ಪುರಸ್ಕಾರದಿಂದ ಉಬ್ಬಿಹೋದಳು. ಮನೋಹರನೂ ಸಂಭ್ರಮದಿಂದ ಹೇಳಿದ.

"ಹಾಗಾದರೆ ನನ್ನದೊಂದು ರಿಕ್ವೆಸ್ಟ್. ಕಲ್ಕತ್ತಾದಲ್ಲಿ ಕರ್ನಾಟಕ ಸಂಗೀತ ಬಹಳ ಅಪರೂಪ. ಕ್ಯಾಸೆಟ್ಸ್, ಬರೀ ಖ್ಯಾತ ಸಂಗೀತಗಾರ್ತಿಯರದ್ದು ಮಾತ್ರ. ನಮ್ಮವರು ಹೇಳಿದ್ದು ನಾವು ಕೇಳಬೇಡವೆ? ಈಗ ನೀವು ಇನ್ನೊಂದೆರಡು ಹಾಡಲೇಬೇಕು."

ಮಧುರ ನಾಚಿ ತಲೆ ಆಡಿಸಿದಳು.

"ಏನೇ ಹೀಗಾಡ್ತೀ? ನಾವೆಲ್ಲ ಏನು ಪಾಪ ಮಾಡಿದ್ದೆವು? ನೀನೀಗ ಹಾಡದಿದ್ದರೆ ನೀನು ನನ್ನ ಗಂಡನಿಗೆ ಅವಮಾನ ಮಾಡಿದಂತೆ" ಎಂದು ಮಾಲತಿಯೂ ಒತ್ತಾಯ ಮಾಡಿದಳು.

"ಛೇ.... ಹೀಗೇಕೆ ಮಾತಾಡ್ತೀಯಾ?" ಮೋಹನ ಮಧುರಳ ಪರವಹಿಸಿದ.

"ಅವಳು ನನ್ನ ಸ್ನೇಹಿತೆ. ನಾನು ಏನೇ ಆಡಿದರೂ ಅವಳು ತಪ್ಪು ಭಾವಿಸುಲ್ಲ ಅಲ್ವೇನೆ?" ಎಂದು ಕೇಳಿದಳು ಮಾಲತಿ.

ಅಷ್ಟರೊಳಗೆ ಮಧುರಂಗೆ ಬೇಸರವಾಗತೊಡಗಿತ್ತು. ಇಲ್ಲಿಂದ ತಪ್ಪಿಸಿಕೊಂಡು ಹೋದರೆ ಸಾಕೆನಿಸಿತ್ತು.

"ಹಾಡ್ತೀನಿ. ಆದರೆ ಒಂದು ಷರತ್ತು. ನೀನು ಮೊದಲು ಹಾಡಬೇಕು."

"ಹೀಗೆ ಷರತ್ತು ಹಾಕಿ ಮಾತನಾಡಿದವಳಲ್ಲ ಎಂದೂ" ಎಂದು ಅನ್ನಿಸಿತ್ತು ಮಾಲತಿಗೆ.

"ಪರವಾಗಿಲ್ಲ. ಕಣೇ, ಬಹಳ ತಯಾರಾಗಿದೀಯ. ಯಾರದ್ದು ಚಿತಾವಣೆ?" ಮೋಹನನ ಕಡೆ ನೋಡಿದಳು.

"ಅವಳು ಹೇಳಿದ್ದರಲ್ಲಿ ತಪ್ಪೇನಮ್ಮ ಇದೆ? ನೀನು ಎರಡು ಹಾಡಿದರೆ, ಅವಳೂ ಹಾಡ್ತಾಳೆ. ಇನ್ನು ಮೇಲೆ ನಿನ್ನ ಹಾಡೂ ನಮಗೆ ಅಪರೂಪವೇ..." ಎಂದರು ತಂದೆ.

"ಹಾಗಾದ್ರೆ ಒಂದು ಕೆಲಸ ಮಾಡೋಣ. ಇವರಿಬ್ಬರೂ ಒಟ್ಟಿಗೆ ಹಾಡಲಿ. ಅದನ್ನು ರೆಕಾರ್ಡ್ ಮಾಡಿಕೊಳ್ಳೋಣ" ಮೋಹನ ನುಡಿದಾಗ ಅದು ಎಲ್ಲರಿಗೂ ಸಮ್ಮತವೆನಿಸಿತ್ತು. ಮಾಲತಿ ತಾನೇ ಒಳಗೆ ಹೋಗಿ ಎಲ್ಲರಿಗೂ ಕಾಫಿ ತಂದಿತ್ತಳು. ಮೋಹನ ರೆಕಾರ್ಡ್ ಪ್ಲೇಯರ್‌ನ ಸೆಟ್ ಮಾಡಿ,

ತಿಂಡಿ ತಟ್ಟೆ ಹಿಡಿದು ಕುಳಿತ.

ಮಧುರ, ಮಾಲತಿ ನುರಿತ ವಿದೂಷಿಯರಂತೆ ಅಕ್ಕಪಕ್ಕ ಕುಳಿತು ಗಂಟಲನ್ನು ಸರಿಪಡಿಸಿಕೊಂಡರು. ಟೇಪ್‌ಗೆ ಹೊಂದುವಂತೆ ಚಿಕ್ಕ ಚಿಕ್ಕ ಕೆಲವು ದೇವರ ನಾಮಗಳನ್ನು ಹಾಡಿದರು. ಇಬ್ಬರೂ ಒಟ್ಟಿಗೇ ಕೂತು ಅಭ್ಯಾಸ ಮಾಡಿಲ್ಲವಾದ್ದರಿಂದ ಸ್ವಲ್ಪ ಏರುಪೇರು ಇತ್ತು. ಎಲ್ಲರಿಗೂ ಮಧುರ ಚೆನ್ನಾಗಿ ಹಾಡುತ್ತಿದ್ದಾಳೆನ್ನುವುದು ತಿಳಿಯುತ್ತಿತ್ತು. ಆದರೆ ಮನೋಹರನಿಗೆ ಅದರಿಂದ ಬೇಸರವೆನಿಸಿರಲಿಲ್ಲ. ಪ್ರೀತಿಸುವ ಹೆಂಡತಿಗೆ ಸಂಗೀತವೇ ಮುಖ್ಯವಲ್ಲ ಅನ್ನುವುದನ್ನು ಈ ಕೆಲವುದಿನಗಳಲ್ಲಿ ಚೆನ್ನಾಗಿ ಅರಿತಿದ್ದ. ಹೊಸದಾಗಿ ಮದುವೆಯಾದವನು, ಅವಳು ಏನೇ ಮಾಡಿದರೂ ಅದು ಸೊಗಸಾಗಿ ಕಾಣುತ್ತಿದ್ದವು ಅವನ ಅಂತರ್ಯಕ್ಕೆ.

ಹಾಡು ಮುಗಿದಿತ್ತು.

"ರೀವೈಂಡ್ ಮಾಡಿ, ಹಾಡು ಹೇಗೆ ರೆಕಾರ್ಡ್ ಆಗಿದೆ ಅಂತ ನೋಡ್ತೀನಿ" ಅಂತ ಮೋಹನ ಹೇಳಿದಾಗ, "ಬೇಡ" ಎಂದು ಕಿರುಚಿದಳು ಮಾಲತಿ. ಎಲ್ಲರೂ ನಕ್ಕಿದ್ದರು.

"ನೀನು ತಂಬಾ ಚೆನ್ನಾಗಿ ಹಾಡ್ತೀಯಾ ಕಣೇ.... " ಮನಃಪೂರ್ವಕವಾಗಿ ಸ್ನೇಹಿತೆಯನ್ನು ಹೊಗಳಿದ್ದಳು.

"ಮೋನ, ನಿನಗೆ ಬಿಡುವಿದ್ದಾಗ, ಇವಳೊಬ್ಬಳೇ ಹಾಡಿರುವುದನ್ನು ಸರಿಯಾಗಿ ರೆಕಾರ್ಡ್ ಮಾಡಪ್ಪಾ. ನಾನು ಹೋಗುವುದರೊಳಗೆ ಆಗಬೇಕು." ಎಲ್ಲರೆದುರಿಗೆ ಅವಳು ನಿರ್ಭಯವಾಗಿ ಹೇಳಿದಾಗ, ಒಬ್ಬೊಬ್ಬರಿಗೆ ಒಂದೊಂದು ತರಹ ಗೊಂದಲ.

"ತುಂಬಾ ಚೆನ್ನಾಗಿ ಹಾಡ್ತೀಯಮ್ಮ... ನಾಳೆ ನಾಡಿದ್ದರಲ್ಲಿ ನಿಮ್ಮ ಮನೆಗೆ ಬಂದು ನಿಮ್ಮ ತಂದೆ ಹತ್ತಿರ ಮಾತನಾಡ್ತೀನಿ" ತಂದೆ ನುಡಿದಾಗ ಮೋಹನ ಏನು ಎಂಬಂತೆ ಮಧುರಳನ್ನು ಪ್ರಶ್ನಿಸಿದ್ದ. ಕಣ್ಣಲ್ಲೇ.

'ಗೊತ್ತಿಲ್ಲ' ಎಂಬಂತೆ ಅವಳು ಸಂಜ್ಞೆಯಲ್ಲೇ ಉತ್ತರಿಸಿದಳು.

"ಪರವಾಗಿಲ್ಲ. ಇಬ್ಬರೂ ಜೋರಾಗೇ ಮಾತನಾಡಿ, ನಾವೆಲ್ಲ ಕಣ್ಣು, ಕಿವಿ ಮುಚ್ಕೋತೀವಿ" ಮಾಲತಿ ಇಬ್ಬರನ್ನು ರೇಗಿಸಿದ್ದಳು. ಅವಳ ಮಾತು ಇನ್ಯಾರಿಗೂ ಅರ್ಥವಾಗಿರಲಿಲ್ಲ. ಮಧುರ ಕೆಂಗುಲಾಬಿಯಾಗಿದ್ದಳು. ಮೋಹನ ತಂಗಿಯ ಜಡೆ ಎಳೆದ.

ಅವಳ ಚೆಲ್ಲಾಟ ಅತಿ ಎನಿಸಿತು ಭವಾನಮ್ಮನಿಗೆ. ಮಾತು ಬದಲಾಯಿಸಲು

ನೋಡಿದಳು.

"ಏನೇನು ಬೇಕೋ ಬೇಡವೋ ಎಲ್ಲಾ ಸರಿಯಾಗಿ ನೋಡಿ. ಪ್ಯಾಕ್ ಮಾಡಿಕೊಂಡಿದೀಯಾ ತಾನೇ....?"

"ಹುಂ.... ನಮ್ಮಾ...."

"ನಾಳೆ ನಮ್ಮ ಅಣ್ಣನ ಮನೆಯಲ್ಲಿ ನಮಗೆಲ್ಲ ಊಟಕ್ಕೆ ಕರೆದಿದ್ದಾನೆ. ನಿಮ್ಮ ಮನೆಗೂ ಬರ್ತೀನಿ ಅಂದಿದ್ದ. ಬಂದಿದ್ನಾ?" ಮಗಳನ್ನು ಕೇಳಿದರು ಭವಾನಮ್ಮ.

"ಹೂನಮ್ಮ. ಮರೆತೇ ಹೋಯ್ತು. ಮಾವ ಬೆಳಿಗ್ಗೇನೇ ಬಂದಿದ್ರು. ನಾವುಗಳು ಸೀದಾ ಅಲ್ಲಿಗೇ ಹೋಗ್ತೀವಿ" ಎಂದಳು ಮಾಲತಿ.

ಆ ದಿನವೂ ಮಧುರ ಮಾಲತಿಯೊಡನೆ ಪ್ರತ್ಯೇಕವಾಗಿ ಮಾತನಾಡಲಾಗಲಿಲ್ಲ. ಅವಳ ಚಡಪಡಿಕೆಯನ್ನು ಮೋಹನ ಗಮನಿಸಿದ. ಅವಳನ್ನು ಕೀಟಲೆ ಮಾಡುವ ಮನಸ್ಸಾಯಿತು. "ಮಾಲಾ, ಆದೇ ಮನೋಹರನ ಸ್ನೇಹಿತ, ಅವನ ಮದುವೆ ವಿಷಯ ಎಲ್ಲಿಯವರೆಗೆ ಬಂತು?" ಬೇಕಂತ ಪ್ರಶ್ನಿಸಿದ ಮಧುರಳಿಗೆ ಕೇಳಿಸುವಂತೆ.

"ಹೌದು..... ಆದರ ಬಗ್ಗೆ ನಿನ್ನನ್ನು ವಿಚಾರಿಸಿ ಹೇಳೊಕ್ಕೆ ಹೇಳಿದ್ದೆನಲ್ಲ" ನೀನೇನು ಮಾಡಿದೆ? ಅವಳೂ ಅದೇ ಧಾಟಿಯಲ್ಲಿ ಕೇಳಿದಳು.

"ನ್ಗೆ ಇನ್ನೂ ಉತ್ತರ ಸಿಕ್ಕಿಲ್ಲ"

ಅಣ್ಣ ತಂಗಿ ಬೇಕೂಂತ ನಾಟಕವಾಡ್ತಿದಾರೆ ಅಂತ ತಿಳಿದಾಗ ಮಧುರ ಹೊರಟಲು ಅನುವಾದಳು. ಎಲ್ಲರಿಗೂ ಹೇಳಿ ಹೊರಟಾಗ ಮೋಹನ ಅವಳನ್ನು ಬಿಟ್ಟು ಬರ್ತೀನಿ ಅಂತ ಹೊರಟ. ಗೇಟಿನ ಹತ್ತಿರ ಬಂದಾಗ, "ಮಧುರ ಪರವಾಗಿಲ್ಲ ನಾನೊಬ್ಬಳೇ ಹೋಗ್ತೀನಿ" ಎನ್ನುತ್ತಾ ಗೇಟು ತೆಗೆದು ಹೊರಟೇಬಿಟ್ಟಳು. ಹಿಂದಿನಿಂದ ಸ್ರರಕ್ಕನೇ ಅವಳ ಕೈ ಹಿಡಿದ ಮೋಹನ. "ಬಿಡಿ ಬಿಡಿ" ಕೊಸರಿಕೊಳ್ಳಲು ನೋಡಿದಳು.

"ಸುಮ್ಮನೇ ಎಲ್ಲರಿಗೂ ತಿಳಿಯುತ್ತೆ. ಜನ ತಪ್ಪು ತಿಳಿದುಕೊಳ್ಳುತ್ತಾರೆ. ಒಬ್ಬಳೇ ಮಾತ್ರ ಹೋಗಕೂಡದು. ನನ್ನಾಣೆ" ಎಂದ.

'ಆಣೆ ಹಾಕಿ ನಿಲ್ಲಿಸಲು ನೀವು ಯಾರು?' ಎಂದು ಕೇಳುವ ಮನಸ್ಸಾದರೂ ತಡೆದುಕೊಂಡಳು.

ತಮ್ಮ ತಮಾಷೆ ಅತಿರೇಕಕ್ಕೆ ಹೋಗ್ತಿದೆ. ಇನ್ನು ಮೇಲೆ ಸುಮ್ಮನಿರಬೇಕು ಎಂದುಕೊಂಡ ಮೋಹನ. ಅವನು ಮಾತಿಲ್ಲದೇ ಸ್ಕೂಟರ್ ಸ್ಟಾರ್ಟ್

ಮಾಡಿದ. ಅವಳು ಮೌನವಾಗಿ ಹತ್ತಿ ಕುಳಿತಳು.

ಮನೆ ಮುಂದೆ ಅವಳನ್ನು ಇಳಿಸಿ, ಹೇಳಿದ, "ಸಾರಿ ಮಧುರ.... ಕ್ಷಮಿಸಿ ಬಿಡು" ಮಧುರ ಅವನ ಕಡೆ ನೋಡದೇ 'ಥ್ಯಾಂಕ್ಸ್' ಎಂದು ಹೇಳಿ ಒಳನಡೆದಳು.

ತನ್ನಿಂದ ಏನೋ ಅವಿವೇಕ ನಡೆಯಿತು ಎನ್ನುವ ಅಪರಾಧಿ ಮನೋಭಾವದಿಂದ ಅವನು ಹಿಂತಿರುಗಿದ.

ಇಷ್ಟೆಲ್ಲ ಆದರೂ ಮಧುರ ಏನೂ ನಡೆದಿಲ್ಲವೆಂಬಂತೆ ವರ್ತಿಸಿದಳು. ಮರುದಿನ ಅವಳ ಮನೆಗೆ ಮೋಹನ ಬಂದಾಗ ಎಂದಿನಂತೆ ಸತ್ಕರಿಸಿದಳು. ಅವನು ಕೇಳಿದ್ದಕ್ಕೆ ಉತ್ತರಿಸಿದ್ದಳು. ಅವಳ ಅಂತರಂಗದಲ್ಲೇನಿದೆ ಎಂದು ಅವನಿಗೆ ತಿಳಿಯಲಿಲ್ಲ.

"ನಾಳೆ ಮಧ್ಯಾಹ್ನದ ಟ್ರೈನಿಗೆ ಮಾಲತಿ ಮನೋಹರ ಹೊರಡ್ತಿದ್ದಾರೆ. ಅವರಿಬ್ಬರೂ  ನಾಳೆ ನಮ್ಮ ಮನೆಗೇ ಊಟಕ್ಕೆ ಬರ್ತಾರಂತೆ. ನೀನೂ ಬರಬೇಕಂತೆ ಮಾಲತಿ ಹೇಳಿದ್ದಾಳೆ."

"ಹುಂ ಆಗಲಿ" ಎಂದಷ್ಟೇ ಹೇಳಿದಳು.

ಮಾರನೇ ದಿನ ತಂಗಿಯನ್ನು ಕರೆದುಕೊಂಡು ಸಮಯಕ್ಕೆ ಮುಂಚೆ ತಾನಾಗಿಯೇ ಬಂದಿದ್ದಳು. ಕೈಯಲ್ಲಿ ಕುರುಕಲು ತಿಂಡಿಗಳನ್ನು ತುಂಬಿದ್ದ ಚೀಲ.

"ಅಮ್ಮ ದಾರಿಗೆ ಅಂತ ಮಾಡಿಕೊಟ್ಟಿದ್ದಾಳೆ. ಬೇಡ ಅನ್ನಬೇಡ"

"ಬೇಡ ಅಂತಿನೇನೇ..... ನಿಮ್ಮ ಮನೆ ತಿಂಡಿ ಅಂದರೆ ನನಗೆ ಯಾವಾಗಲೂ ತುಂಬಾ ಇಷ್ಟ" ಸಂತೋಷದಿಂದ ಚೀಲಗಳನ್ನು ಕೈಗೆ ತಗೊಂಡಳು. ಅಲ್ಲಿಯೇ ನಿಂತಿದ್ದ ಮೋಹನನಿಗೆ ಬಾಯಿ ಕಟ್ಟಿದಂತಾಗಿತ್ತು.

ಆಮೇಲೆ ಸರ ಸರ ಕೆಲಸ ಮುಗಿಸಿ, ಊಟ ಮುಗಿಸಿ ರೈಲ್ವೆ ಸ್ಟೇಷನ್‌ಗೆ ಹೊರಡಬೇಕಾಗಿತ್ತು. ಮನೋಹರನ ತಂದೆ ತಾಯಿ  ಕೆಲವು ಲಗೇಜ್‌ಗಳೊಂದಿಗೆ ಸ್ಟೇಷನ್ನಿಗೆ ಬರುವವರಿದ್ದರು.

ಎಷ್ಟೇ ತಡೆದುಕೊಂಡಿದ್ದರೂ, ರೈಲು ಹೊರಟಾಗ ಎಲ್ಲರ ಕಣ್ಣುಗಳೂ ಹನಿ ಗೂಡಿದವು. ರೈಲು ಮರೆಯಾದ ನಂತರ ಕಣ್ಣೊರೆಸಿಕೊಂಡು ಎಲ್ಲರೂ ಅವರವರ ಮನೆಗೆ ಹಿಂತಿರುಗಿದರು.

ದಿನಗಳು ಸರಿದವು. ಮಾಲತಿ ಇಲ್ಲದ ಮನೆ ಬಿಕೋ ಎನ್ನತೊಡಗಿತ್ತು. ಮೋಹನ ಆಫೀಸಿಗೆ ಹೊರಟುಹೋದರಂತೂ, ಗಂಡ ಒಂದು ಕಡೆ

ಅವಳೊಂದು ಕಡೆ. ಭವಾನಮ್ಮನಿಗೆ ದಿನ ಕಳೆಯುವುದೇ ಬೇಸರವೆನಿಸುತ್ತಿತ್ತು. ಸಾಯಂಕಾಲ ಪುರಾಣ ಕಥೆಗಳಿಗಾದರೂ ಹೋಗಿ ಬರಬೇಕೆಂದುಕೊಂಡಳು ಆಕೆ.

ಶೇಷಾದ್ರಿಯ ಕಾಲಿನ ಕಟ್ಟನ್ನು ಬಿಚ್ಚಲು ಇನ್ನೂ ಎರಡು ವಾರಗಳು ಬೇಕಿದ್ದವು. ಕೋಲೂರಿಕೊಂಡು, ಮಗಳ ಸಹಾಯದಿಂದ ಸ್ವಲ್ಪ ಓಡಾಡುತ್ತಿದ್ದರು. ಮೋಹನ ಬಂದು ಕುಳಿತರೆ, ಆತನಿಗೆ ಎಷ್ಟೋ ಸಮಯ ಕಳೆದಂತಾಗುತ್ತಿತ್ತು.

"ನಮಗೋಸ್ಕರ ಒದ್ದಾಡಿದ ಪಾಪ...." ಎಂದುಕೊಂಡಾಗೆಲ್ಲ, ತಮಗೂ ಇಂತಹ ಮಗನಿದ್ದಿದ್ದರೇ ಅಂತ ಅನ್ನಿಸುತ್ತಿತ್ತು. ತಮ್ಮ ಜೀವನದ ಘಟನೆಗಳ ಸುರುಳಿ, ಮನದ ಮುಂದೆ ಬಿಚ್ಚಿಕೊಂಡು ನಿಲ್ಲುತ್ತಿತ್ತು. ಖೇದಗೊಂಡ ಮನಸ್ಸು ನಿಟ್ಟುಸಿರು ಬಿಡುತ್ತಿತ್ತು. ಅದನ್ನೆಲ್ಲ ಹೊರಗಿ ನವರಿಗೆ ಹೇಳಿಕೊಳ್ಳುವಂತಿಲ್ಲ. ಮನದಲ್ಲೇ ಕೊರಗಿದ್ದೂ ಉಂಟು.

ಮಗಳು ಬೆಳೆದು ದೊಡ್ಡವಳಾಗಿದ್ದಾಳೆ. ಅವಳ ಸ್ನೇಹಿತೆಗೂ ಮದುವೆಯಾಗಿ ಗಂಡನ ಮನೆಗೆ ಹೊರಟು ಹೋದಳು. ಈ ಹುಡುಗಿಗೂ ಆಸೆ ಇರುವುದಿಲ್ಲವೆ? ಎಂದುಕೊಂಡಾಗ ಏನೋ ದಿಗಿಲಾಗುತ್ತಿತ್ತು. ಹೆಂಡತಿಯೊಡನೆ ಯಾವ ವಿಷಯವನ್ನೂ ಚರ್ಚಿಸುತ್ತಿರಲಿಲ್ಲ. ಮೂಡಿಯಂತೆ ಯಾವಾಗಲೂ ಆಕೆಗೆ ಮನೆ ಕೆಲಸವಿದ್ದೇ ಇರುತ್ತಿತ್ತು. ಗಂಡ, ಮಕ್ಕಳೊಂದಿಗೆ ಹೆಚ್ಚಿಗೆ ಮಾತನ್ನೇ ಆಡುತ್ತಿರಲಿಲ್ಲ. ಮಕ್ಕಳಿಗೂ ಅದು ಅಭ್ಯಾಸವಾಗಿಹೋಗಿತ್ತು. ಯಾವಾಗಲೂ ಏನೋ ಒಂದು ರೀತಿಯ ಭಯ ಆವರಿಸಿಕೊಂಡಂತೆಯೇ ಇರುತ್ತಿತ್ತು ಅವಳ ಮುಖ. ಆ ಭಯವನ್ನು ಹೋಗಲಾಡಿಸಲು ಆತ ಎಷ್ಟೋ ಪ್ರಯತ್ನ ಪಟ್ಟಿದ್ದುಂಟು. ಮೇಲು ತೋರಿಕೆಗೆ ಆಕೆ ಕೆಲವುಸಲ ನಿರ್ಭಯಳಂತೆ ನಡೆದು ಕೊಂಡರೂ, ಆಕೆಯ ಮನಃಸ್ಥಿತಿ ಸರಿಯಾಗಿರಲಿಲ್ಲ.

ಮಧುರ ಹುಟ್ಟುವ ಎಷ್ಟೋ ತಿಂಗಳ ಮೊದಲೇ ಆತನೊಡನೆ ಹೇಳಿದ್ದಳು. ನಮಗೆ ಈ ಮಗು ಬೇಡ. ನನಗೆ ಭಯ ಆಗುತ್ತೆ ಅಂತ.

"ಭಯ ಏಕೆ! ಇದು ಎಲ್ಲಾ ತಾಯಂದಿರಿಗೂ ಆಗುವ ಅನುಭವ. ನಾನಿದೀನಿ ಹೆದರಬೇಡ." ಎಂದು ಸಮಾಧಾನಗೊಳಿಸಿದ್ದರು ಶೇಷಾದ್ರಿ.

ಆದರೂ ಅವಳು ಭಯದ ಚಿಪ್ಪಿನಿಂದ ಹೊರಗೆ ಬಂದಿರಲಿಲ್ಲ. ಹುಟ್ಟಿದ ಮಗುವಿನ ಮುಖವನ್ನು ನೋಡಲು ಸಹ ಹೆದರಿದ್ದಳು. ದಿನಗಳೆದಂತೆ ತನ್ನ ಕರ್ತವ್ಯವೆಂಬಂತೆ ಲಾಲನೆ ಪೋಷಣೆಯಿಂದ ಮಗುವನ್ನು ಬೆಳೆಸುವಾಗ, ಮಗುವಿನ ಮುಖವನ್ನು ಕದ್ದು ನೋಡಿದ್ದಳು. ಅನಂತರ ಸ್ವಲ್ಪ ಸ್ವಲ್ಪವಾಗಿ

ಹೊಂದಿಕೊಂಡಳು. ಅಷ್ಟು ಹೊತ್ತಿಗೆ ಮಧುರ ಹತ್ತು ವರ್ಷದವಳಾಗಿದ್ದಳು.

ಆ ನಂತರ ಹುಟ್ಟಿದವಳು ರಾಗಿಣಿ. ಗಂಡು ಮಗುವಾಗಬಹುದೆಂಬ ನಿರೀಕ್ಷೆಯಲ್ಲಿದ್ದವರಿಗೆ, ಸಣ್ಣ ಆಘಾತ,. ಮಗು ಮುದ್ದಾಗಿದ್ದರೂ ಕೊರತೆ ಇದ್ದೇ ಇತ್ತು. ಆದರೆ ಆ ಕೊರತೆಯ ಬಗ್ಗೆ ಇಬ್ಬರೂ ಚರ್ಚಿಸಲಿಲ್ಲ.

ಹೆಚ್ಚಿಗೆ ತಂಟೆ ತಕರಾರಿಲ್ಲದೇ ಮಧುರ ಬೆಳೆದಳು. ಆದರೆ ರಾಗಿಣಿ ತರಲೆ ಎನಿಸಿಕೊಂಡಳು. ಹಠ, ಮೊಂಡತನ ಕ್ರಮೇಣ ಕಡಿಮೆಯಾದರೂ, ತಾಯಿ ಅಸಹನೆಯಿಂದ ಹೊಡೆದಾಗಲೆಲ್ಲಾ, ಮಧುರ ಅವಳನ್ನು ಬಿಡಿಸಿಕೊಳ್ಳುತ್ತಿದ್ದಳು. ಹಾಗಾಗಿ, ತಾಯಿಗೆ ಮಕ್ಕಳ ಮೇಲೆ ಹೆಚ್ಚಿನ ಮಮಕಾರವಿರಲಿಲ್ಲ. ಆದರೆ ಅನಾದರಣೆಯೂ ಇರಲಿಲ್ಲ. ಪ್ರೀತಿ, ಮಾತುನಗೆ,ಚೆಲ್ಲಾಟ ಎಲ್ಲಾ ತಂದೆಯೊಡನೆ ಮಾತ್ರ.

ಗಂಭೀರ ಸ್ವಭಾವದ ಮಧುರ, ಮಾಲತಿಗೆ ಅಚ್ಚುಮೆಚ್ಚಿನ ಸ್ನೇಹಿತೆಯಾದಳು. ರಾಗಿಣಿ ಇನ್ನೂ ಹುಟ್ಟಿರಲಿಲ್ಲ. ಆ ಸಮಯದಲ್ಲಿ ಪಕ್ಕದ ಮನೆಗೆ ಮೋಹನನ ತಂದೆ ಬಾಡಿಗೆಯವರಾಗಿ ಬಂದು ನೆಲೆಸಿದ್ದರು. ಹೈಸ್ಕೂಲಿನಲ್ಲಿ ಓದುತ್ತಿದ್ದ ಮೋಹನ ಹುಡುಗಿಯರ ಜೊತೆ ಬೆರೆಯುತ್ತಿರಲಿಲ್ಲ.

ಸರಕಾರಿ ನೌಕರಿಯಲ್ಲಿದ್ದ ಅವನ ತಂದೆ ರಿಟೈರ್ ಆಗುವವರೆಗೂ ಆ ಮನೆಯಲ್ಲಿದ್ದು ನಂತರ ಸ್ವಂತ ಮನೆ ಕಟ್ಟಿಸಿಕೊಂಡು ಹೊರಟುಹೋಗಿದ್ದರು. ಆದರೂ, ಮಾಲತಿ, ಮಧುರಳ ಸ್ನೇಹಕ್ಕೆ ಚ್ಯುತಿ ಬಂದಿರಲಿಲ್ಲ. ಆದರೆ ಈಗ? ಅವಳು ಮದುವೆಯಾಗಿ ಹೊರಟುಹೋದಳು. ಮಗಳು ಒಂಟಿಯಾದಳು ಎನಿಸಿದಾಗ, ತಾವೂ ಅವಳ ಮದುವೆಗೆ ಪ್ರಯತ್ನಿಸಬೇಕೆಂದೆನಿಸುತ್ತಿತ್ತು. ಆದರೆ..... ಏನೋ ದಿಗಿಲು.

ಏನೂ ತಿಳಿಯದ ಹಸುಗೂಸಿನಂತೆ ಅವಳು. ಅವಳ ಬಾಳು ಹಸನಾಗಬೇಕು.

ಮದುವೆಯಾಗಿ ಸುಖವನ್ನು ಅನುಭವಿಸಿದರೆ ಸರಿ, ಇಲ್ಲದಿದ್ದರೆ.... ಜೀವನ ಪರ್ಯಂತ ಎಲ್ಲರೂ ಕೊರಗಬೇಕಾಗುತ್ತದೆ. ಎಂದೆ ಎನಿಸುತ್ತಿತ್ತು. ಮನೆಯಲ್ಲೇ ಕೂತಷ್ಟೂ ಆತನ ಚಿಂತೆಗಳು ಜಾಸ್ತಿಯಾಗುತ್ತಿದ್ದವು.

ಎಷ್ಟೋ ದಿನಗಳಾಯಿತು. ಈ ಕಡೆ ಮೋಹನನೂ ಬಂದಿಲ್ಲ ಎಂದು ಆತ ಯೋಚಿಸುತ್ತಿದ್ದಾಗ ಪೋಸ್ಟ್‌ಮ್ಯಾನ್ ಕಾಗದ ಎಸೆದುಕೊಂದ. ಮಧುರ ಬಂದು ಕವರನ್ನೆತ್ತಿ ನೋಡಿದಳು. ಅವಳ ಹೆಸರಿಗೆ, ಮಾಲತಿ ಬರೆದ ಕಾಗದ. "ಅಪ್ಪಾ, ಮಾಲತಿ ಕಾಗದ ಬರೆದಿದ್ದಾಳೆ." ಸಂಭ್ರಮವಿತ್ತು ಧ್ವನಿಯಲ್ಲಿ.

"ಹುಂ, ಓದು. ಸುಖವಾಗಿ ತಲುಪಿರಬೇಕು."

"ರೂಮಿನಲ್ಲಿ ಕೂತು, ಸ್ನೇಹಿತೆಯ ಕಾಗದವನ್ನು ನಿಧಾನವಾಗಿ ಓದಿಕೊಂಡಳು. ತನ್ನ ಸುಖಮಯ, ವರ್ಣಮಯ ಜೀವನವನ್ನು ಸೊಗಸಾಗಿ ವರ್ಣಿಸಿ ಬರೆದಿದ್ದಳು. ಮನೋಹರನನ್ನು ಬಾಯಿ ತುಂಬಾ ಹೊಗಳಿದ್ದಳು. ಮೋಹನನ ಬಗ್ಗೆ ಒಂದಿಷ್ಟು ಜಂಭಕೊಚ್ಚಿಕೊಂಡಿದ್ದಳು. ಕಡೆಯಲ್ಲಿ ನಿನಗೇ ಗೊತ್ತು ನಮ್ಮಮ್ಮ ಒರಟು. ಆದರೆ ಅವಳೀಗ ಒಂಟಿ. ನಿನಗೆ ಬಿಡುವಾದಾಗ ಹೋಗಿ ಮಾತನಾಡಿಸಿ ಬಾ. ಅವಳು ಬಾಯಿ ಬಿಟ್ಟು ಹೇಳದಿದ್ದರೂ ಸಂತೋಷವಾಗುತ್ತೆ. ಅಂತ ತಂದೆತಾಯಿಗಳ ಆರೋಗ್ಯ, ರಾಗಿಣಿಯ ವಿದ್ಯಾಭ್ಯಾಸದ ಬಗ್ಗೆ ವಿಚಾರಿಸಿ, ಕಾಗದವನ್ನು ಮುಗಿಸಿದ್ದಳು."

ಮೋಹನನೂ ಈಚೆಗೆ ಬಂದಿಲ್ಲ. ಇದೇ ನೆವ ಮಾಡಿಕೊಂಡು, ತಾನೇಕೆ ಹೋಗಿ ಬರಬಾರದು ಎಂದುಕೊಂಡಳು. ಹೋಗುವುದೋ ಬೇಡವೋ ಅಂತ ಯೋಚಿಸಿ, ಹೋಚಿಸಿ, ಕಡೆಗೆ ಹೋಗಿಬರುವುದೆಂದು ನಿಶ್ಚಯಿಸಿದಳು. ಬಲವಂತರಾಗಿ ರಾಗಿಣಿಯನ್ನೂ ಎಳೆದು ಕೊಂಡು ಹೊರಟಳು.

ಬಾಗಿಲಿನಲ್ಲೇ ಕುರ್ಚಿಹಾಕಿಕೊಂಡು ಕುಳಿತಿದ್ದರು ಮೋಹನನ ತಂದೆ.

"ಬಾಮ್ಮಾ, ಬಾ" ಎಂದು ವಿಶ್ವಾಸದಿಂದ ಕರೆದು, ತಾವೇ ಹೇಳಿಕೊಂಡಳು.

"ನೋಡಮ್ಮ..... ಏನಾಯ್ತು ಅಂತೀಯ..... ಮನೇಲಿ ಬೇಜಾರು ಅಂತ ಪುರಾಣಕ್ಕೆ ಹೋಗಿದ್ದಳು. ಬರುವಾಗ ಎಡವಿ ಬಿದ್ದಿದ್ದೇ ನೆವ, ಕಾಲು ಉಳುಕಿತು. ನೋವು ಅಂತ ಮಲಗಿದ್ದಾಳೆ."

ಅದು ತೀರ ಅನಿರೀಕ್ಷಿತ ಸುದ್ದಿ ಇವಳಿಗೆ.

"ಯಾವಾಗ ಆಯ್ತು ಇದೆಲ್ಲ.....?"

"ಆಯ್ತು, ಎರಡು ದಿನವಾಯ್ತು. ಇನ್ನೂ ನೋವು ಕಡಿಮೇನೇ ಆಗಿಲ್ಲವಂತೆ. ನರಳ್ತಾ ಇದ್ದಾಳೆ. ಇಷ್ಟೊತ್ತೂ ನಾನು ಅವಳೆದುರಿಗೇ ಕೂತಿದ್ದೆ. ಈಗ ಎದ್ದು ಬಂದೆ ಸಾಯಂಕಾಲದ ಗಾಳಿ ಹಿತವಾಗಿರುತ್ತೆ ಅಂತ. ಅಲ್ಲದೇ ಮೋಹನನೂ ಬಂದಿಲ್ಲ."

"ನನಗೆ ಗೊತ್ತಿರಲೇ ಇಲ್ಲ. ಗೊತ್ತಿದ್ದರೆ, ಅವತ್ತೇ ಬಂದು ಏನಾದರೂ ಸಹಾಯ ಮಾಡ್ತಿದ್ದೆ"

"ಪರವಾಗಿಲ್ಲ ಬಿಡಮ್ಮ ನಾನಿದೀನಿ. ಮೋಹನ ಇದ್ದಾನೆ. ಏನು ಅಂತ ಅಂದರೆ, ಮಲತಿ ಹೊರಟುಹೋಗಿ ಹದಿನೈದು ದಿನಗಳಾಯಿತು. ಅವಳಿಂದ ಇನ್ನೂ ಕಾಗದವೂ ಬಂದಿಲ್ಲ. ಅದೂ ಆತಂಕವಾಗಿದೆ. ಮನೆ ಬಿಟ್ಟು ನಾನು ಮನೋಹರನ ಮನೆಗೆ ಹೋಗಿ ಕೇಳಿ ಬರಲೂ ಆಗಿಲ್ಲ."

"ನನಗೆ ಅವಳಿಂದ ಇಂದು ಕಾಗದ ಬಂತು. ಹಾಗೇ ವಿಚಾರಿಸಿಕೊಂಡು ಹೋಗೋಣ ಅಂತ ಬಂದೆ. ನಾನು ಹೋಗಿ ಅವರನ್ನು ಮಾತನಾಡಿಸಲೇ?"

"ಮಾಲತಿಯಿಂದ ನಿನಗೆ ಲೆಟರ್ ಬಂತೆ? ಇಲ್ಲಿಯವನು ಯಾವನೋ ಇನ್ನೂ ತಂದು ಹಾಕಿಲ್ಲ. ಹೋಗಲಿ. ತಲುಪಿದ್ದಾಳೆ ಅಂತ ತಿಳೀತಲ್ಲ. ನಿಧಾನವಾಗಿ ಬರಲಿ ಕಾಗದ. ಅವಾಂತರವೇನಿಲ್ಲ. ಅವಳೂ ಒಬ್ಬಳೇ ಮಲಗಿದ್ದಾಳೆ. ಹೋಗಿ ಮಾತನಾಡಿಸಮ್ಮ, ಹೇಗೂ ನೀನು ಇದೀಯ, ಹೋಗಿ ಬರಲೆ? ಹೊರಗೆ ಸುತ್ತಾಡದೇ ಕಾಲು ಜಡ್ಡು ಕಟ್ಟಿದಂತಾಗಿದೆ."

"ಹುಂ. ಹೋಗಿ ಬನ್ನಿ. ನಾನು ಇರ್ತೀನಿ ಇನ್ನು ಸ್ವಲ್ಪ ಹೊತ್ತು."

"ಮೋಹನನೇ ಬರುವಾಗ ಏನಾದರೂ ತಿಂಡಿ ತರ್ತಾನೆ. ಕಾಫಿ ಮಾಡಿಫ್ಲಾಸ್ಕಿನಲ್ಲಿ ಹಾಕಿಟ್ಟಿದೀನಿ. ನಾನು ಬರ್ತೀನಿ" ಎಂದು ಚಪ್ಪಲಿ ಮೆಟ್ಟಿ ನಡದೇಬಿಟ್ಟರು. ಮಧುರ ರಾಗಿಣಿಯ ಮುಖ ನೋಡಿ ನಕ್ಕಳು.

ಮಧುರ ಒಳ ಹೊಕ್ಕಳು.

"ಹೇಗಿದೀರಮ್ಮ..... ಕಾಲು ಉಳುಕಿದೆಯಂತೆ. ನನಗೊಂದು ಮಾತು ತಿಳಿಸಿದ್ದರೆ ತಕ್ಷಣವೇ ಬರ್ತಿದ್ದೆ. ಎಷ್ಟು ಫಜೀತಯಾಯ್ತೋ ಏನೋ"

"ಏನೂ ಇಲ್ಲ. ಸ್ವಲ್ಪ ನೋವು ಅಷ್ಟೆ. ಎರಡು ದಿನದಲ್ಲಿ ಸರಿ ಹೋಗುತ್ತೆ ಅಂತ ಡಾಕ್ಟರು ಹೇಳಿದ್ದಾರೆ. ಗಂಡ, ಮಗ ಇರುವಾಗ ಹೊರಗಿನವರು ಏಕೆ!" ಎಂದಿನ ಧೋರಣೆಯಲ್ಲೇ ಉತ್ತರಿಸಿದಳು ಭವಾನಮ್ಮ.

ಆ ಮತು ಅವಳಿಗೆ ಹಿತವೆನಿಸಲಿಲ್ಲ.

"ಮಾಲತಿಯಿಂದ ಕಾಗದ ಬಂದಿದೆ. ಸುಖವಾಗಿದ್ದಾಳಂತೆ. ನಿಮಗೂ ಬಂದಿರಬಹುದು ಎಂದುಕೊಂಡಿದ್ದೆ."

"ಯಾವ ಪಡಪೋಶಿ ಪೋಸ್ಟ್‌ಮ್ಯಾನೋ, ಒಂದನ್ನೂ ಸಮಯಕ್ಕೆ ಸರಿಯಾಗಿ ತಲುಪಿಸಲ್ಲ."

"ಏನಾದ್ರೂ ಕೆಲಸವಿದ್ದರೆ ಹೇಳೀಮ್ಮ. ಮಾಡಿಕೊಡ್ತೀನಿ"

"ಇರಲಿ ಬಿಡು ಪರವಾಗಿಲ್ಲ. ಎರಡು ದಿನದಿಂದ ಮನೆ ಗಂಡಸರ ಪಾಳ್ಯವಾಗಿದೆ. ಎಲ್ಲೆಲ್ಲಿ ಏನೇನು ಬಿದ್ದಿದೆಯೋ.... ಆಮೇಲೆ ನಾನೇ ನೋಡ್ಕೋತೀನಿ"

ಅಷ್ಟರಲ್ಲಿ, "ಅರೇ ಗಿಣಿ.... ಯಾವಾಗ ಬಂತು?" ಎಂದು ಮೋಹನ ಮುದ್ದಾಗಿ ರಾಗಿಣಿಯನ್ನು ಮಾತನಾಡಿಸಿದ್ದು ಕೇಳಿಸಿ, ಮಧುರ ಹೊರಗೆ ಬಂದಳು.

"ನೋಡಿದ್ರಾ ಅಮ್ಮನ್ನ?" ಕೇಳಿದ.

"ನನಗೊಂದು ಮಾತು ತಿಳಿಸಬಾರದಾಗಿತ್ತೆ....."

"ಸುಮ್ಮನೇ ನಿಮಗೆಲ್ಲ ಏನು ತಿಳಿಸುವುದು ಅಂತ"

"ಯಾಕೆ? ನಾವೀಗ ಹೊರಗಿನವರಾಗಿಬಿಟ್ಟೆವೇ.... ಕೇಳದೇ ನಮಗೆ ಸಹಾಯ ಮಾಡಿದ್ದಿರಿ ನೀವು..... ನಮ್ಮ ಸಹಾಯದ ಅವಶ್ಯಕತೆ ನಿಮಗಿಲ್ಲವೋ ಅಥವಾ ಆ ಅರ್ಹತೆ ನಮಗಿಲ್ಲವೋ?"

"ಪರವಾಗಿಲ್ವೇ..... ನಿನಗೂ ಮಾತನಾಡುಕ್ಕೆ ಬರುತ್ತೆ..... ಅವಶ್ಯಕತೆ, ಅರ್ಹತೆ ಇವೆಲ್ಲಾ ನನಗೆ ಹೊಸ ಪದಗಳು."

"ತಮಾಷೆ ಬೇಡ..... ನನಗ್ಯಾಕೆ ತಿಳಿಸಲಿಲ್ಲ ಹೇಳಿ"

"ಅಮ್ಮ ಯಾರಿಗೂ ತಿಳಿಸುವುದು ಬೇಡ ಅಂದಳು."

"ನಿಜವಾಗಿಯೂ?"

"ಹುಂ.. ನಿಜವಾಗಿಯೂ ಅವಳಿಗೆ ಬೇರೆ ಯಾರಿಂದಲೂ ಕೆಲಸ ಮಾಡಿಸಿಕೊಂಡು ಅಭ್ಯಾಸವಿಲ್ಲವಂತೆ, ಹೋಗಲಿಬಿಡು. ಆ ಮಾತೇಕೆ ಈಗ! ಹೋಟೆಲ್ಲಿನಿಂದ ತಿಂಡಿ ತಂದಿದ್ದೀನಿ. ಅಪ್ಪ ಎಲ್ಲಿ? ಬಾರೇ ರಾಗಿಣಿ...." ಕರೆದ.

"ಅಪ್ಪ ವಾಕಿಂಗ್ ಹೋಗಿದ್ದಾರೆ....."

"ಅಮ್ಮನ್ನ ಒಬ್ಬಳನ್ನೇ ಬಿಟ್ಟು...."

"ನಾನಿದ್ದೀನಲ್ಲ, ನಾನು ಬಂದ ಮೇಲೇ ಹೊರಟರು."

"ಅವರ ಕಾಲನ್ನು ಕಟ್ಟಿ ಹಾಕಿದ ಹಾಗೆ ಆಗಿತ್ತೇನೋ, ಸಿಕ್ಕಿದ್ದೇ ಛಾನ್ಸ್ ಅಂತ ತಪ್ಪಿಸಿ ಕೊಂಡು ಓಡಿಹೋಗಿದ್ದಾರೆ" ಇಬ್ಬರೂ ನಕ್ಕರು.

"ನಿಜ ಹೇಳ್ತೀನಿ. ಅವರು ಹೋದದ್ದೇ ಹಾಗೇ ಓಡಿಕೊಂಡು...." ಮತ್ತೆ ಇಬ್ಬೂ ನಕ್ಕಾಗ, ಒಳಗಿನಿಂದ ಭವಾನಮ್ಮ ಕ್ಷೀಣಸ್ವರದಲ್ಲಿ ಮೋನ.... ಮೋನ... ಎಂದು ಕೂಗಿದ್ದು ಕೇಳಿಸಿತ್ತು. ಇಬ್ಬರೂ ನಗೆ ನಿಲ್ಲಿಸಿ ಮುಖ ಮುಖ ನೋಡಿಕೊಂಡರು.

"ಬಂದೇಮ್ಮಾ" ಎನ್ನುತ್ತಾ ಮೋಹನ ಒಳಗೆ ಹೋದ.

"ಆ ಹುಡುಗಿ ಮುಖ ಕಂಡ ಕೂಡಲೇ ನಿಮ್ಮಪ್ಪ ತಿರುಗಾಡಕ್ಕೆ ಹೋಗಿದ್ದಾರೆ. ಎಷ್ಟು ಬೇಜವಾಬ್ದಾರಿ ಮನುಷ್ಯ?"

"ಅಪ್ಪನ್ನ ಅನ್ನಬೇಡಮ್ಮ. ಅವರಿಗೆ ತಿರುಗಿ ಅಭ್ಯಾಸ. ಎರಡು ಮೂರು ದಿನದಿಂದ ಮನೆಯಲ್ಲೇ ಇದ್ದು ಬೇಜಾರಾಗಿರಬಹುದು. ತಪ್ಪೇನು?"

"ನಿನಗೆ ನಾನು ಹೇಳಿದ್ನಲ್ಲ ಅದೇ ತಪ್ಪು."

"ನಿನಗೆ ಬಿ.ಪಿ. ಹೆಚ್ಚಾಗಿರಬೇಕು. ಅದಕ್ಕೇ ಮಾತು ಮಾತಿಗೂ ರೇಗ್ತೀಯ. ನಾನು ಈಗಲೇ ಹೋಗಿ ಡಾಕ್ಟರನ್ನು ಕರೆದುಕೊಂಡು ಬರ್ತೀನಿ"

"ಬೇಡ ಮಾರಾಯ. ಅವರು ಮೈಮುಟ್ಟಿದರೆ ನನಗೆ ಮುಳ್ಳು ಚುಚ್ಚಿದ ಹಾಗಾಗುತ್ತೆ. ಹೋಗು ಕಾಫಿ ಕುಡಿ."

ಅಷ್ಟು ಅಂದಿದ್ದೇ ಸಾಕು ಎಂಬಂತೆ ಮೋಹನ ಹೊರಗೆ ಬಂದ. ಬೇಡ ಬೇಡವೆಂದರೂ ರಾಗಿಣಿಗೆ ಹೋಟೆಲ್ಲಿನ ದೋಸೆ ಕೊಟ್ಟ. ಮಧುರಂಗೆ ಬಲವಂತವಾಗಿ ಕಾಫಿ ಕೊಟ್ಟ.

ಮಧುರ ತಿಂಡಿ ತಟ್ಟೆ ಕಾಫಿ ಲೋಟಗಳನ್ನು ಜೋಡಿಸಿಕೊಂಡು ಅಡಿಗೆ ಮನೆಗೆ ಹೋದಳು.

"ನೋಡು, ಎಲ್ಲಾ ಹೇಗೆ ಅಸ್ತವ್ಯಸ್ತವಾಗಿಬಿದ್ದಿದೆ. ಮಾಲತಿಗೆ ಮದುವೆ ಯಾಗಿ ಹೋದ ಮೇಲೆ. ಅಮ್ಮ ಕಾಲುಳುಕಿಸಿಕೊಂಡು ಮಲಗಬೇಕೆ!"

ಅವನ ಮಾತಿಗೆ ನಗಬೇಕೆನಿಸಿತು.

"ಚೆನ್ನಾಗಿದೆ. ಅದಕ್ಕೂ ಇದಕ್ಕೂ ಏನು ಸಂಬಂಧ?"

"ಮಾಲತಿ ಇದ್ದಿದ್ದರೆ ಎಷ್ಟೋ ಕೆಲಸ ಕಡಿಮೆ ಆಗುತ್ತಿತ್ತು. ಈಗ ರಾತ್ರಿಯ ಅಡಿಗೆ ಕೆಲಸ ನನ್ನದು.... ಬೆಳಿಗ್ಗೆ ಅಪ್ಪ ಮಾಡ್ತಾರೆ."

ಮಧುರ ನಕ್ಕಳು. "ಇವತ್ತು ನಾನು ಮಾಡ್ತೀನಿ. ಏನು ಮಾಡಬೇಕು ಹೇಳಿ. ಮಾಡಿಟ್ಟು ಹೋಗ್ತೀನಿ."

"ಬೇಡಬಿಡು. ಅದು ಸರಿಯಲ್ಲ."

"ಏಕೆ! ನಿಮ್ಮಮ್ಮ ಏನಾದ್ರೂ ಅನ್ನಬಹುದು ಅಂತ ಹೆದರಿಕೆ ಅಲ್ಲತಾನೆ?"

"ಹೆದರಿಕೆ ಏನಿಲ್ಲ.... ಆದರೆ ಅವಳು ಒಂದು ತರಹ ಮಾತನಾಡಿದರೆ, ಸುಮ್ಮನೇ ಎಲ್ಲರಿಗೂ ಬೇಜಾರಾಗುತ್ತೆ."

"ನಾನು ಮಾಡಿದೆ ಅಂತ ಅಮ್ಮನಿಗೆ ಹೇಳಲೇಬೇಡಿ."

""ಅವಳು ಅಲ್ಲಿದ್ದರೂ ಕಿವಿ ಎಲ್ಲಾ ಇಲ್ಲೇ ಇರುತ್ತೆ"

"ಹಾಗಾದ್ರೆ ಒಂದು ಕೆಲಸ ಮಾಡಿ. ಎಂಟು ಗಂಟೆ ಹೊತ್ತಿಗೆ ನಮ್ಮ ಮನೆಗೆ ಬನ್ನಿ. ಬಿಸಿ ಬಿಸಿ ಅಡಿಗೇನು ಕ್ಯಾರಿಯರ್‌ನಲ್ಲಿ ತುಂಬಿಸಿಟ್ಟಿರ್ತೀನಿ"

"ಬೇಡ ಬಿಡು ಮಧುರ. ಇವತ್ತೊಂದು ದಿನ ಕಳೆದರೆ ಆಯ್ತಾ? ನಾಳೆ....."

"ನಾಳೆ ನಾಡಿದ್ದು, ನಿಮ್ಮಮ್ಮ ಎದ್ದು ಓಡಾಡುವವರೆಗೂ ನಾನು ಮಾಡಿ ಕೊಡ್ತೀನಿ. ಬೇಜಾರೇನಿಲ್ಲ ನನಗೆ"

"ಥ್ಯಾಂಕ್ ಯೂ ಮಧುರ. ಅಷ್ಟು ಹೇಳಿದ್ಯಲ್ಲಾ ಅಷ್ಟೇ ಸಾಕು"

ಅವನು ಮಾತನಾಡುತ್ತಿದ್ದಂತೆಯೇ ಮಧುರ ಕೆಲವು ಪಾತ್ರೆಗಳನ್ನು ತೊಳೆದಿಟ್ಟಳು. ಅಡಿಗೆ ಮನ ಕಸ ಗುಡಿಸಿ, ಒರೆಸಿದಳು. ಕವರಿನಲ್ಲಿ ಹಾಗೇ ಬಿದ್ದಿದ್ದ ತರಕಾರಿಗಳನ್ನು ತೊಳೆದು ಹೆಚ್ಚಿಕೊಟ್ಟಳು. ಪ್ಯಾಕೆಟ್‌ನಲ್ಲಿದ್ದ ಹಾಲನ್ನು ಪಾತ್ರೆಗೆ ಸುರಿದು ಕಾಯಲು ಒಲೆ ಮೇಲಿಟ್ಟಳು. ಅವಳನ್ನೇ ಗಮನಿಸುತ್ತಿದ್ದವನು ನುಡಿದ.

"ನೋಡಿದ್ಯಾ ನಿನ್ನ ಕೈ ಚಳಕಾನಾ? ಎಲ್ಲಾ ಹೇಗೆ ಹೊಳೆಯುತ್ತಿದೆ ಲಕಲಕಾಂತ" ಅವಳ ಸನಿಹಕ್ಕೆ ಬಂದು ನಿಂತ. ಅವನ ದೇಹದ ಶಾಖದ ತಾಪ ತಲಪುವ ಮೊದಲೇ ನಿಮ್ಮಮ್ಮ ಕರೀತಿದ್ದಾರೆ ಎಂದಳು. ಅವನು ಬೆಚ್ಚಿ ಹಿಂದೆ ಸರಿದ.

"ಇನ್ನೂ ಇಲ್ಲಿ ನಿಂತಿದ್ದರೆ ತಾನು ಖಂಡಿತಾ ಕೆಟ್ಟವನಾಗ್ತೀನಿ" ಎಂದು ಮನಸ್ಸಿನಲ್ಲಿ ಹೇಳಿಕೊಂಡು ಹೊರಗೆ ಬಂದು ರಾಗಿಣಿಯೊಡನೆ ಮಾತಿಗೆ ಕುಳಿತ ಮೋಹನ.

ಮಧುರ ಬೆಳಗಿನ ಸಾರನ್ನು ಮತ್ತೊಮ್ಮೆ ಕುದಿಸಿಟ್ಟು ತಾನೇ ಎಲ್ಲಾ ಹುಡುಕಿ ವಗ್ಗರಣೆ ಹಾಕಿ ಪಲ್ಯ ಮಾಡಿ, ತಣ್ಣಗಿದ್ದ ಹಾಲಿಗೆ ಸಕ್ಕರೆ ಹಾಕಿ, ಬಾಳೆಹಣ್ಣಿನ ಹೋಳುಗಳನ್ನು ಕತ್ತರಿಸಿ ಹಾಕಿ, ಯಾಲಕ್ಕಿ ಪುಡಿ ಮಾಡಿ ಸೇರಿಸಿ, ಎಲ್ಲಾ ಒಂದು ಕಡೆ ಕೈಗೆ ಸಿಗುವಂತೆ ಕಣ್ಣಿಗೆ ಕಾಣುವಂತೆ ಇಟ್ಟು ಹೊರಗೆ ಬಂದಳು.

ಮೋಹನ ರಾಗಿಣಿಯೊಡನೆ ಮಾತನಾಡುತ್ತಿದ್ದುದನ್ನು ಕಂಡು ಭವಾನಮ್ಮ ಮಲಗಿದ್ದ ಕಡೆ ಬಂದಳು.

"ಏನು ಮಾಡ್ತಿದ್ದೆ ಇಷ್ಟು ಹೊತ್ತು! ಇನ್ನು ಮನೆಗೆ ಹೋಗಿಲ್ವೆ!" ಅನುಮಾನದಿಂದ ಕೇಳಿದಾಗ, ಅವಳ ಮೈ ಉರಿದುಹೋಯಿತು. ಆದರೂ ಸಹನೆಯಿಂದ.

"ಅಡಿಗೆ ಮನೇನ ಕ್ಲೀನ್ ಮಾಡ್ದೆ....." ಎಂದಳು.

"ಬಿದ್ದಿರುತ್ತಿತ್ತು ಹಾಗೇ. ನೀನ್ಯಾಕೆ ಮಾಡುಕ್ಕೆ ಹೋದೆ? ಮೋಹನ ಮಾಡು ಅಂತ ಅಂದನಾ?"

"ಇಲ್ಲ. ನಾನೇ ಮಾಡಿದೆ.... ನನ್ನಿಂದ ಏನು ಸಹಾಯ ಬೇಕಾದ್ರೂ ಕೇಳಿ, ಮಾಡ್ತೀನಿ. ಹೊತ್ತಾಯ್ತು ನಾನಿನ್ನು ಬರ್ತೀನಿ" ಎಂದು ಹೇಳಿ ಹೊರಗೆ ಬಂದಳು.

ಮೋಹನ ಅವಳನ್ನೇ ಪ್ರಶ್ನಾರ್ಥಕವಾಗಿ ನೋಡಿದ.

"ರಾಗಿಣಿ, ಹೊತ್ತಾಯ್ತು. ಹೊರಡೋಣ ಬಾ" ಅವಳ ಕೈ ಹಿಡಿದು, "ಬರ್ತೀನಿ" ಎಂದು ಹೇಳಿ ಹೊರಟಳು. ಮೋಹನ ಅವಳ ಹಿಂದೆಯೇ ಬಂದ.

"ಅಮ್ಮ ಏನಾದ್ರೂ ಅಂದಿದ್ರೆ ಬೇಜಾರು ಮಾಡ್ಕೋಬೇಡ ಮಧುರ." ಅವಳ ಪರವಾಗಿ ಕ್ಷಮೆ ಕೇಳ್ತೀನಿ

"ಕ್ಷಮಿಸುವಂಥಾದ್ದು ಏನಾಯ್ತೀಗ? ನಾಳೆಯಿಂದ ಎರಡು ಹೊತ್ತು ನಾನೇ ಊಟ ತಂದು ಕೊಡ್ತಿನಿ. ನೀವು ಬೇಡ ಅನ್ನಬಾರದು ಬೇಡ ಅಂದರೆ ಬೇಜಾರಾಗುತ್ತೆ."

"ಹುಂ, ಸರಿ. ಮಾಲತಿ ಅಂತೂ ಸದಾ ನಿಮ್ಮ ಮನೆ ಅಡಿಗೇನ, ತಿಂಡೀನ ತುಂಬಾ ಹೊಗಳುತ್ತಿದ್ದಳು. ಈಗ ಆ ಸೌಭಾಗ್ಯ ನಮಗೆ ಒದಗಿದೆ. ಹೋಟೆಲ್ಲಿನ ತಿಂಡಿ ಬೇಜಾರು. ನನಗಂತೂ ಅಡಿಗೆ ಚೆನ್ನಾಗಿ ಬರುಲ್ಲ. ನಮ್ಮಪ್ಪನಿಗೂ ಅಷ್ಟೇ...."

"ಸಧ್ಯ ಒಪ್ಪಿದಿರಲ್ಲ. ಅಮ್ಮ ಏನಂತಾರೋ ಅಂತ ಅನ್ನಲಿಲ್ಲವಲ್ಲ"

"ಆ ಸಂದೇಹ ಈಗಲೂ ಇದೆ. ಅಮ್ಮ ತಿನ್ನದಿದ್ದರೆ ಬೇಡ.... ಅವಳಿಗೆ ಅಪ್ಪ ಗಂಜಿ ಮಾಡಿಕೊಡ್ತಾರೆ"

"ಯಾಕೆ ನಮ್ಮ ಮನೆ ಊಟವನ್ನು ನಿಮ್ಮಮ್ಮ ತಿನ್ನುವುದಿಲ್ಲವೆ?"

"ಅವಳಿಗೊಂದು ತರಹ ಸ್ವಾಭಿಮಾನ, ಒಂದು ತರಹ ಮೊಂಡುತನ. ಈ ಮನೆಗೆ ಸೊಸೆಯಾಗಿ ಬರುವವಳು ಬಂದೋ ಅದನ್ನೆಲ್ಲ ಬಿಡಿಸಬೇಕು ಅಥವಾ ಅತೀ ದುರದೃಷ್ಟವಂತೆಯಾಗಿರಬೇಕು"

ಮಧುರ ನಡುಗಿದಳು.

"ನಿಮ್ಮಮ್ಮ ತೀರಾ ಅಷ್ಟು ಕೆಟ್ಟವರಲ್ಲ ಅಂತ ಅನ್ನಿಸುತ್ತೆ"

"ಅದನ್ನು ಸೊಸೆಯಾಗಿ ಬಂದವಳು ಹೇಳಬೇಕು."

ಮಧುರ ಉತ್ತರಿಸದೇ ಮುಂದೆ ಮುಂದೆ ತಂಗಿಯೊಡನೆ ನಡೆದಳು. ನಿಟ್ಟುಸಿರು ಬಿಡುತ್ತಾ ಮೋಹನ ಒಳಗೆ ಬಂದ.

ತಾಯಿ ಗೋಡೆ ಹಿಡಿದುಕೊಂಡು ಕಷ್ಟಪಟ್ಟು ಬಚ್ಚಲಮನೆಕಡೆ ಹೋಗುತ್ತಿದ್ದುದನ್ನು ಗಮನಿಸಿ ಅವಳ ಸಹಾಯಕ್ಕೆ ಬಂದ.

"ಎಲ್ಲಿ ಹೋದರೋ ನಿಮ್ಮಪ್ಪ.... ಇನ್ನು ಬಂದಿಲ್ಲ ತಾನೆ?"

"ಇನ್ನೂ ಬಂದಿಲ್ಲಮ್ಮ. ಒಬ್ಬ ನರ್ಸನ್ನು ಗೊತ್ತು ಮಾಡಲೇನಮ್ಮ...."

ಎಷ್ಟು ಕಷ್ಟಪಡ್ತಿದೀಯ?"

"ಥೂ ಥೂ ಬೇಡಪ್ಪಾ, ಎಂತಹ ಜಾತಿಯವಳೋ ಏನೋ, ಅವಳನ್ನೇಕೆ ಮುಟ್ಟಿಸಿಕೊಳ್ಳಬೇಕು?"

"ಸರಿ. ಹೀಗೆ ಕಷ್ಟಪಡು." ಎಂದು ಕೈ ಒದರಿದ. ಅವನು ಹಿಡಿದುಕೊಂಡಿದ್ದಾನೆಂದು ತಿಳಿದಿದ್ದ ಭವಾನಮ್ಮ ಹಿಡಿತ ಸಿಕ್ಕದೇ ತತ್ತರಿಸಿ ಕೆಳಗೆ ಬಿದ್ದುಬಿಟ್ಟಳು. "ಅಯ್ಯೋ ಅಯ್ಯೋ... " ಎಂದು ಕಿರುಚಿಕೊಂಡಾಗ, "ಏನಾಯ್ತಮ್ಮ" ಎಂದ ಗಾಭರಿಯಿಂದ.

"ನನ್ನ ಕೈ ಬಿಟ್ಟು ಕೆಳಗೆ ಬೀಳುವಂತೆ ಮಡಿದ್ಯಲ್ಲೋ, ಈಗ ಏನಾಯ್ತಮ್ಮ ಅಂತ ಕೇಳ್ತೀಯಲ್ಲ ಏನೂ ತಿಳೀದವನ ಹಾಗೆ. ನನ್ನ ಮಗನೇ ನನಗೆ ಶತ್ರುವಾದನಲ್ಲ."

"ಸುಮ್ಮನಿರಮ್ಮಾ... ನಾನೆಲ್ಲಿ ಹಿಡಿದುಕೊಂಡಿದ್ದೆ ನಿನ್ನ ಕೈನ... ನೀನೇ ಬಿದ್ದು ನನ್ನನ್ನು ಅಂತೀಯಲ್ಲ"

"ಹೌದಪ್ಪಾ, ನಾನು ಹಾಗೇನೇ... ಹೀಗೆ ಕೈಕಾಲು ಮುರಿದುಕೊಂಡು ಬಿದ್ದಿರುವ ಬದಲು ಸತ್ತಿದ್ದರೇ ಚೆನ್ನಾಗಿರುತ್ತಿತ್ತು. ದೇವರೇ! ಎಂತಹ ಗತಿ ತಂದಿಟ್ಟೆಯಲ್ಲಪ್ಪಾ"
ಆಲಾಪಿಸತೊಡಗಿದಳು.

"ಅಕ್ಕಪಕ್ಕದವರು ಏನಂದು ಕೊಳ್ತಾರೆ! ನಾನು ಹಿಡಿದುಕೊಳ್ತೀನಿ..."

"ಬೇಡಪ್ಪಾ... ಬೇಡ. ನಾನು ತೆವಳಿಕೊಂಡು ಹೋಗ್ತೀನಿ"

"ಹೂಂ. ಹೋಗು. ಹಾಗೇ ಹೋಗು. ಎಷ್ಟು ಅನುಸರಿಸಿಕೊಂಡು ಹೋದರೂ ಏನಾದ್ರೂ ಆಡ್ತೀಯಾ! ನನಗೇನಂತೆ?" ಎಂದು ಅವನು ಅಲ್ಲಿಂದ ಹೊರಟುಹೋದಾಗ ಆಕೆ ಕಲ್ಲಾದಳು.

ತನ್ನ ಮಗ ತನ್ನನ್ನು ಹೀಗೆ ಅನಾದರಣೆ ಮಾಡಿ ಬಿಟ್ಟು ಹೋಗಬಹುದು ಎಂದು ಅವಳು ಊಹಿಸಿರಲಿಲ್ಲ. ಮಗನನ್ನು ತಾನಾಗಿಯೇ ಬಿಟ್ಟುಕೊಡಬಾರದು ಎಂದು ಕೊಂಡು "ಅಯ್ಯೋ ಯಾರಾದ್ರೂ ಬನ್ನಿ.. ನಿಮಗೆ ವಾಕಿಂಗ್‌ಗೆ ಏನು ಅವಸರವಿತ್ತು? ಬಾರೋ, ಮೋನ ಬಾರೋ.. ಎಲ್ಲಿ ಹೊರಟುಹೋದೆಯೋ?"

ತಾಯಿಯ ಕಿರುಚಾಟ ಕೇಳಲಾರದೆ ಅವನು ಬಂದು ತಾಯಿಯನ್ನು ಎಬ್ಬಿಸಿದ. ಅವಳು ಹಾಗೇ ಕುಂಟಿಕೊಂಡು ಮತ್ತೆ ವಾಪಸ್ಸು ರೂಮಿಗೆ ಬಂದು ಮಲಗಿದಳು. ತಾಯಿಯ ವರ್ತನೆಯಿಂದ ಅವನಿಗೆ ಬೇಸರವಾಗಿತ್ತು.

ಈ ಆವುಟವೆಲ್ಲಾ ಯಾಕೆ ಎಂದೆನಿಸಿತ್ತು.

ಆ ರಾತ್ರಿ ಮಗ ತಂದು ಕೊಟ್ಟ ಊಟವನ್ನು ಮಾತಿಲ್ಲದೇ ತಿಂದು ಮುಗಿಸಿದಳು. ದಿನಾ ಬರೀ ಅನ್ನ ಸಾರು, ಉಪ್ಪಿನ ಕಾಯಿ ತಿಂದು ಬೇಸರವಾಗಿತ್ತು. ಪಲ್ಯ ತುಂಬಾ ರುಚಿಯಾಗಿದೆ ಎನಿಸಿತ್ತು. ಮಗನ ಉಬ್ಬಿಕೊಂಡ ಮುಖ ನೋಡಿ, ಯಾರು ಮಾಡಿದ್ದೆಂದು ಕೇಳುವ ಧೈರ್ಯ ಬರಲಿಲ್ಲ. ನಿದ್ದೆ ಬರುವವರೆಗೂ, ಗಂಡನನ್ನು ಎದುರಿಗೆ ಕೂರಿಸಿಕೊಂಡು ಚೆನ್ನಾಗಿ ಹೀಯಾಳಿಸಿ ಅಂದು ಆಡಿ ಆಗಿತ್ತು.

"ಅಪ್ಪ ಯಾಕೆ ಸುಮ್ಮನಿದ್ದಾರೆ! ಹಿಂತಿರುಗಿ ಒಂದಿಷ್ಟು ಅನ್ನಬಾರದೇ" ಎಂದೆನಿಸಿತ್ತು ಅವನಿಗೆ. ಬೆಳಿಗ್ಗೆ ಬೇಗ ಎಚ್ಚರವಾದರೂ ಏಳದೇ ಮಲಗಿದ್ದ.

"ಮೋನ ಏಳೋ.... ಆಫೀಸಿಗೆ ಹೊತ್ತಾಗುತ್ತೆ. ಕಾಫಿ ಮಾಡಿದ್ರೆ ತಂದು ಕೊಡ್ತೀಯಾ!" ಎಂದು ಭವಾನಮ್ಮ ಕೂಗಿದಾಗ ಅವನಿಗೆ ಕೋಪ ಬಂದಿತ್ತು.

ಇವಳ ಸೇವೇನೂ ಮಾಡಬೇಕು. ಇವಳು ಅಂದಿದ್ದನ್ನು ಸಹಿಸಿಕೊಳ್ಳಬೇಕು. ಇದೆಲ್ಲಿಯ ಪೀಕಲಾಟ? ಮನೋಹರನಂತೆ ತಾನೂ ಯಾವುದಾದರೂ ಬೇರೆ ಊರಿನಲ್ಲಿದ್ದಿದ್ದರೆ ಚೆನ್ನಾಗಿತ್ತೇನೋ ಅಂತ ಸಹ ಅನ್ನಿಸಿತ್ತು.

ಎದ್ದು, ಮುಖ ತೊಳೆದು, ತಾನು ಕಾಫಿ ಕುಡಿದು, ನಂತರ ಅಮ್ಮನಿಗೆ ಕಾಫಿತಂದುಕೊಟ್ಟ. ಈಗ ಹೇಗನ್ನಿಸುತ್ತೆ! ಕೇಳಿದ, ತನ್ನ ಕರ್ತವ್ಯ ಎಂಬಂತೆ.

"ಈಗ ಎಷ್ಟೋ ವಾಸಿ ಅಂತ ಅನ್ನಿಸುತ್ತೆ. ರಾತ್ರಿ ಬಿದ್ದಾಗ, ಪ್ರಾಣವೇ ಹೋಗುವಷ್ಟು ನೋವಾಯ್ತು. ಇದೇನಾಯ್ತಪ್ಪಾ ಎಂದುಕೊಂಡಿದ್ದೆ."

"ಬಿದ್ದ ರಭಸಕ್ಕೆ ಉಳುಕು ಹೆದರಿಕೊಂಡು ಓಡಿ ಹೋಯ್ತೂಂತಾ ಕಾಣುತ್ತೆ" ವ್ಯಂಗ್ಯವಾಗಿ ತಮಾಷೆ ಮಾಡಿದ.

"ಇರಬಹುದು" ಅಂತ ತಾಯಿ ಒಪ್ಪಿಕೊಂಡಾಗ ಬೆರಗಾದ. ಇವಳ ತಲೆ ಕೆಟ್ಟಿದೆಯೇ ಎಂಬ ಅನುಮಾನ ಸಹಬಂತು. ಮರುಕವೂ ಮೂಡಿತು.

ಅಷ್ಟರಲ್ಲಿ ಸ್ನಾನ ಮುಗಿಸಿ ಬಂದ ತಂದೆ ಕೇಳಿದರು.

"ತಿಂಡಿ ಏನು ಮಾಡಲೆ! ಅಥವಾ ಅಡಿಗೇನೇ ಮಾಡಿ ಬಿಡಲೊ?"

"ಏನೋ ಒಂದು ಮಾಡಿ. ಇವನು ಆಫೀಸಿಗೆ ಹೊರಡುವ ಮುಂಚೆ ಮುಗಿಸಿದ್ದರೆ ಸರಿ".

"ನಾನಿವತ್ತು ಆಫೀಸಿಗೆ ಹೋಗುವುದಿಲ್ಲ. ರಜ ಹಾಕಿದೀನಿ"

"ಯಾಕೊ? ಅವತ್ತು ಕೇಳಿದಾಗ ರಜವಿಲ್ಲ ಎಂದಿದ್ದೆ"

"ಅಂದಿದ್ದೆ ಏನೋ ಒಂದು ಅಡ್ಜಸ್ಟ್ ಮಾಡ್ತೀನಿ"

"ಹಾಗಾದ್ರೆ ನೀನು ಅಡಿಗೆ ಮಾಡ್ತೀಯೇನೋ?"

"ಹೂನಪ್ಪ, ನೀವು ಬೇಕಾದರೆ ಯಾರಾದರೂ ಸ್ನೇಹಿತರ ಮನೆಗೆ ಹೋಗಿಬನ್ನಿ ನಿಮಗೂ ಮನೇಲೇ ಇದ್ದೂ ಇದ್ದೂ ಬೇಸರವಾಗಿದೆ"

"ಅವರೆಲ್ಲಿಗೂ ಹೋಗುವುದು ಬೇಡ. ಮನೆಯಲ್ಲೇ ಇರಲಿ. ಈ ನೆವದ ಯಾದರೂ ದುರಭ್ಯಾಸಗಳನ್ನು ಬಿಡಲಿ"

"ಅವರು ಅವರ ದುರಭ್ಯಾಸಗಳನ್ನು ಬಿಡುವುದಾದರೆ, ನೀನೂ ನಿನ್ನ ಕೆಲ ಅಭ್ಯಾಸಗಳನ್ನು ಬಿಡಬೇಕಾಗುತ್ತದೆ"

"ನನಗೇನಿದೆಯೋ ದುರಭ್ಯಾಸ?" ನಾನು ಯಾವ ಸ್ನೇಹಿತೆಯ ಮನೆಗೆ ಹೊತ್ತಲ್ಲ ಹೊತ್ತಿನಲ್ಲಿ ಹೋಗಿ ಕುಕ್ಕರುಬಡಿತೀನಿ?"

"ಇರಬಹುದು. ಆದರೆ ಬೇರೆ ದುರಾಭ್ಯಾಸಗಳಿಲ್ಲವೆ?"

"ನಾನು, ಮನೆ ಮಕ್ಕಳು, ಸಂಸಾರ ಅಂತ ನಿಸ್ವಾರ್ಥವಾಗಿ ಮಾಡ್ತೀನಿ ನೋಡು ಅದೇ ದುರಭ್ಯಾಸವಿರಬೇಕು...." ಸಿಡುಕುತ್ತಾ ನುಡಿದಿದ್ದಳು ಭವಾನಮ್ಮ.

"ಎಲ್ಲರಿಗೂ ಅವರವರು ಮಾಡಿದ್ದು ಸರಿ ಅಂತಲೇ ಅನ್ನಿಸಿರುತ್ತೆ. ಅದ ಬೇರೆಯವರಿಗೆ ಸರಿಯಲ್ಲಾಂತ ಅನ್ನಿಸಿದಾಗ, ಅದು ಕೆಟ್ಟದ್ದು ಅನ್ನಿಸುತ್ತೆ."

"ಏನೋಪ್ಪ. ನೀನು ಅದೇನು ಹೇಳ್ತಿದೀಯೋ ನನಗೆ ಅರ್ಥವಾಗ್ತಿಲ್ಲ"

"ಹೋಗಲಿ ಬಿಡು ಅರ್ಥವಾಗುವುದೂ ಇಲ್ಲ ನಿನಗೆ"

"ಇದೇನು ಇವನು ಏನೇನೋ ಅಂತಿದ್ರೂ ನೀವೂ ಸುಮ್ಮನೇನೇ ಇದೀರಲ್ಲ

"ನಾನೇನು ಹೇಳಲಿ? ನನಗಿಂತ ಎತ್ತರಕ್ಕೆ ಬೆಳೆದಿರುವವನನ್ನು ದಂಡಿಸಲೇ ಅಲ್ಲದೇ ಅವನು ಹೇಳಿದ್ದು ತಪ್ಪು ಅಂತ ನನಗನ್ನಿಸುತ್ತಿಲ್ಲ"

"ಹೇಳಿದ್ನಲ್ಲ.... ತಪ್ಪೆಲ್ಲಾ ನನ್ನದೇ...." ತಲೆ ತಲೆ ಚೆಚ್ಚಿಕೊಂಡಳು.

"ನೋಡಿದ್ಯಾ? ನೀನು ಹೀಗೆ ಆಡ್ತೀಯಲ್ಲ. ಅದಕ್ಕೇ ಅಪ್ಪ ನಿನ್ನಿಂದ ದೂ ದೂರವೇ ಇರ್ತಾರೆ. ಸ್ನೇಹಿತರ ಮನೆಗೆ ಹೋಗ್ತಾರೆ. ಅಲ್ವೇನಪ್ಪಾ!"

ತಂದೆ ನಕ್ಕರು. ಉತ್ತರಿಸಲಿಲ್ಲ.

"ಅಪ್ಪ ಮಗ ಮಾತನಾಡಿಕೊಂಡು, ನನ್ನನ್ನು ಹೀಯಹೊಳಿಸುತ್ತಿರುವಂತಿದೆ ನಾನು ಎಲ್ಲಾದರೂ ದೇಶಾಂತರ ಹೋಗ್ತೀನಿ. ಆಗ ನಿಮಗೆಲ್ಲ ಬುದ್ಧಿಬರುತ್ತೆ"

"ಮಗನಿಗೆ ಮದುವೆ ಮಾಡಿಬಿಟ್ಟು ಹೋಗು. ಆ ಆಸೆ ಉಳಿಸ್ಕೊಂಡು ಹೋಗಬೇಡ. ಇಬ್ಬರು ನಕ್ಕರು.

"ಮಗನ ಬೆಂಬಲವಿದೆ ಹಂಗಿಸಿ, ಹಂಗಿಸಿ,ಎನ್ನುತ್ತಾ ಗೋಡೆ ಕಡೆ ತಿರುಗಿ ಮಲಗಿದಳು ಭವಾನಮ್ಮ. ಅಪ್ಪ ಮಗ ಅಲ್ಲಿಂದ ಹೊರಟುಹೋದರು.

"ಅಪ್ಪ ಈಗೇನೂ ಅಡಿಗೆ ಮಾಡಬೇಡಿ. ಮಧುರ ತಂದು ಕೊಡ್ತೀನಿ ಅಂದಿದ್ದಾಳೆ. ನನಗೆ ಸ್ವಲ್ಪ ಬೇರೆ ಕೆಲಸವಿದೆ. ಹೋಗಿ ಬರ್ತೀನಿ" ಎಂದ.

"ಆ ಮಗೂಗೇಕೋ ಸುಮ್ಮನೇ ತೊಂದರೆ?"

"ಅವಳೇ ತರ್ತೀನಿ ಅಂದಳು. ಅವಳು ಬಂದರೆ ಅಮ್ಮನಿಗೂ ಸಮಯ ಹೋಗುತ್ತೆ... ನಿಮಗೂ ಸ್ವಲ್ಪ ನಿಶ್ಚಿಂತೆ ಇರುತ್ತೆ."

"ಆ ಹುಡುಗಿ ಬಂದಾಗ, ಒಂದೆರಡು ಹಾಡನ್ನು ಹೇಳಿಸಬೇಕು" ತನಗೇ ಎಂಬಂತೆ ಹೇಳಿಕೊಂಡರು.

ಮಧುರ ಎರಡು ಟಿಫಿನ್ ಕ್ಯಾರಿಯರ್‌ಗಳಲ್ಲಿ ಊಟಗಳನ್ನು ತುಂಬಿಸಿಕೊಂಡು ಆಟೋದಲ್ಲಿ ಬಂದಳು. ಮೋಹನ ಅವಳ ಕೈನಿಂದ ಚೀಲಗಳನ್ನು ತೆಗೆದುಕೊಂಡ.

"ಆಫೀಸಿಗೆ ಹೋಗಲಿಲ್ವಾ!" ಕೇಳಿದಳು.

"ಇಲ್ಲ, ನೀನು ರಸಕವಳ ತರ್ತೀನಿ ಅಂದೆಯಲ್ಲ ಅದಕ್ಕೆ ಮನೆಯಲ್ಲೇ ಉಳಿದುಬಿಟ್ಟೆ" ಎಂದ ತಮಾಷೆಯಾಗಿ.

"ನಿಜವಾಗಲೂ?" ನಂಬದವಳಂತೆ ಕೇಳಿದಳು.

"ಹೂಂ" ಎಂದ ಮೋಹನ ಆಟೋದವನಿಗೆ ಹಣ ಎಣಿಸಿಕೊಟ್ಟ.

"ನಿಮಗೆ ಕೊಡಬೇಕಾದ ಹಣವನ್ನೇ ಕೊಟ್ಟಿಲ್ಲ ಇನ್ನು"

"ಪರವಾಗಿಲ್ಲ ಬಿಡು, ನಾನೇನು ಕೇಳಿದ್ನೆ ಈಗ?"

"ಹಾಗಲ್ಲ. ಆದರೂ....."

"ಪರವಾಗಿಲ್ಲ. ಮಾಲತಿಗೆ ಕೊಡುತ್ತಿರಲಿಲ್ಲವೆ? ಅದೇ ತರಹ ಅಂದ್ಕೋ"

"ಮಾಲತಿ ನಿಮ್ಮ ತಂಗಿ. ನಿಮ್ಮ ಮನೆಯವಳು"

"ನೀನೂ ಹೊರಗಿನವಳಲ್ಲ" ಅವನ ಬಾಯಿಂದ ಮಾತು ಬಿದ್ದಿತ್ತು. ಅಷ್ಟರಲ್ಲೇ ಸರಿ ಮಾಡಿಕೊಂಡು "ನಿಧಾನವಾಗಿ ಕೊಡುವ ಮಾತನ್ನಾಡಿದರೆ ಆಯಿತು. ಈಗ ಒಳಕ್ಕೆ ಬಾ...." ಎಂದು ಅಲ್ಲಿಂದ ಒಳಬಂದ. ಅವಳೂ ಹಿಂದೆ ಬಂದಳು. ತಂದೆ ಮುಗುಳ್ನಕ್ಕರು. "ಏನಮ್ಮ ಮಧುರ ನಮಗೋಸ್ಕರ ಎಷ್ಟು ತೊಂದರೆ ನಿನಗೆ?"

"ತೊಂದರೆ ಏನು ಇದರಲ್ಲಿ? ಅಮ್ಮ ಅಡಿಗೆ ಮಾಡಿದಳು. ನಾನು ಆಟೋದಲ್ಲಿ ತಂದೆ"

"ನಮಗೆ ಪಗಡದಸ್ತಾದ ಊಟ. ಮಾಲತಿಯಂತೂ ಸದಾ ನಿಮ್ಮ ಮನೆ ಅಡಿಗೇನ ಹೊಗಳುತ್ತಿದ್ದಳು. ನಿಮ್ಮ ತಾಯಿಗೆ ಥ್ಯಾಂಕ್ಸ್ ಹೇಳಿಬಿಡು."

ತಂದೆ ಮಗನ ಸ್ವಭಾವ ಒಂದೇ ತರಹ ಎಂದುಕೊಂಡಳು.

"ನಿನಗೆ ಬೇಜಾರಿಲ್ಲದಿದ್ದರೆ, ನಮಗಿಬ್ಬರಿಗೂ ಬಡಿಸ್ತೀಯಾ?" ಅಂತ ಆತ ಕೇಳಿದಾಗ ಎದ್ದಳು. ಮೋಹನ ತಟ್ಟೆಗಳನ್ನು ಇಟ್ಟ.

"ಮೊದಲು ಅಮ್ಮನಿಗೆ ಕೊಟ್ಟು ಬಂದುಬಿಡ್ತೀನಿ" ಎಂದ

ಅವಳು ಒಂದು ತಟ್ಟೆಗೆ ಎಲ್ಲವನ್ನು ಹಾಕಿ ಕೊಟ್ಟಳು ಅವನು ತೆಗೆದುಕೊಂಡು ಹೋದ.

"ಇಷ್ಟು ಬೇಗ ಅಡಿಗೆ ಆಯ್ತೇನೋ... ಅದೇನು ಇಷ್ಟೊಂದು ಬಗೆ!"

"ಮಧುರ ತಂದಿದ್ದಾಳಮ್ಮ" ಭವಾನಮ್ಮನ ಮುಖ ಬಿಗಿಯಾಯಿತು

"ಅವಳೇಕೆ ತರುವುದಕ್ಕೆ ಹೋದಳು! ನೀನೋ, ಅವರೋ ಹೇಳಿರಬೇಕು"

"ಇಲ್ಲಮ್ಮ. ಮೆಲ್ಲಗೆ ಮಾತನಾಡು." ಅವಳಿಗೆ ಕೇಳಿಸೀತು

"ಕೇಳಿದರೆ ಏನೀಗ? ಇದೆಲ್ಲ ನನಗಿಷ್ಟವಿಲ್ಲಪ್ಪ"

"ನಿನಗಿಷ್ಟವಿಲ್ಲದಿದ್ದರೆ ಬಿಡು. ನನಗೆ ನಮ್ಮಪ್ಪನಿಗೆ ಇಷ್ಟ"

"ಹಾಗಾದ್ರೆ ನೀವಿಬ್ರೆ ತಿನ್ನಿ. ನಾನು ತಿನ್ನಲ್ಲ.

"ಸರಿ. ನಿನ್ನಿಷ್ಟ. ನಿನಗೆ ಗಂಜಿ ಮಾಡಿ ತಂದುಕೊಡ್ತಿನಿ. ಗಟಗಟನೆ ಕುಡಿದು ಬಿಡು." ಅವನು ತಟ್ಟೆಯನ್ನು ಅಲ್ಲಿಯೇ ಇಟ್ಟು ಹೊರಗೆ ಹೋದಾಗ, ಆಕೆಗೆ ಮೈ ಪರಚಿಕೊಳ್ಳುವಂತಾಯ್ತು. ಎಷ್ಟು ಹೊತ್ತಾದರೂ, ಅವನು ಮತ್ತೆ ಬರದಿದ್ದಾಗ ನಿಧಾನವಾಗಿ ಗೋಡೆ ಹಿಡಿದುಕೊಂಡು ಅಡಿಗೆ ಮನೆ ತನಕ ಬಂದಳು.

ಮಧುರ ಬಡಿಸುತ್ತಾ ಇದ್ದಾಳೆ. ಇಬ್ಬರೂ ಕೂತು ಊಟ ಮಾಡುತ್ತಿದ್ದಾರೆ. ಮನೆಯಲ್ಲಾ ಅಡಿಗೆಯ ಘಮದಿಂದ ತುಂಬಿಹೋಗಿದೆ. ಅವಳ ಹಸಿವೂ ಕೆರಳಿತು. ಅಷ್ಟರಲ್ಲಿ ಮಧುರ ಅವಳನ್ನು ನೋಡಿದಳು. "ಏನು ಬೇಕಾಗಿತ್ತಮ್ಮ. ಕರೆದಿದ್ರೆ ನಾನೇ ಬರುತ್ತಿದ್ದೆನಲ್ಲ" ಎಂದಳು.

"ಒಂದು ಚಮಚ ಬೇಕಾಗಿತ್ತು." ಎಂದಳು ಬಿಗುವಾಗಿ.

ತಟ್ಟೇಲಿ ಎರಡು ಚಮಚವಿದ್ದುದನ್ನು ಮೋಹನ ಗಮನಿಸಿದ್ದ. "ತಾಯಿಯ ಇದ್ಯಾವ ಅವತಾರ?" ಎಂದುಕೊಂಡ.

ಮಧುರ ಚಮಚ ತಂದು, ಆಕೆಯನ್ನು ಹಿಡಿದು ನಿಧಾನವಾಗಿ ನಡೆಸಿಕೊಂಡು ರೂಮಿಗೆ ಬಂದಳು.

"ನೋಡು. ಎಲ್ಲರಿಗೂ ಎಷ್ಟು ಕಷ್ಟ? ನನಗೇ ಏಕೆ ಹೀಗಾಗಬೇಕಾಗಿತ್ತು?"

ಅದಕ್ಕೆ ಅವಳು ಏನು ಉತ್ತರಿಸಿಯಾಳು! ಮೆಲ್ಲಗೆ ಕೂರಿಸಿದಳು.

ಟೇಬಲ್ ಮೇಲಿದ್ದ ತಟ್ಟೆಯನ್ನು ಅವಳ ಕೈಗಿತ್ತು, "ನಿಮಗೇನಾದರೂ

ಬೇಕಾಗಿದ್ರೆ ಕರೀರಿ. ಶ್ರಮಪಟ್ಟು ಎದ್ದು ಬರಬೇಡಿ" ಎಂದು ಹೇಳಿದಳು.

ಆಕೆ ಏನೂ ಹೇಳಲಿಲ್ಲ ನಿಧಾನವಾಗಿ ಊಟ ಮಾಡಿದಳು.

ಕಲೆಸಿ ತಂದಿದ್ದ ಮೊಸರನ್ನವನ್ನು ಹಾಕಿ, ಉಪ್ಪಿನಕಾಯಿ ಬಡಿಸಿದಳು. ಕ್ಯಾರಿಯರ್ ಚೊಕ್ಕಟವಾಗಿ ಖಾಲಿಯಾಗಿತ್ತು.

"ಅನ್ನದಾತಾ ಸುಖೀಭಾವ" ಎಂದು ಆತ ಎದ್ದಾಗ, 'ನಿನಗೆ ನಿನಗೆ' ಎನ್ನುವಂತೆ ಮೋಹನ ಬೆರಳು ಮಾಡಿ ಸೂಚಿಸಿದ.

ತಟ್ಟೆ ಲೋಟಗಳನ್ನು ಮೋಹನ ತೆಗೆದಿಟ್ಟ. ಪಾತ್ರೆಗಳನ್ನು ತೊಳೆದು ಕ್ಯಾರಿಯರ್ ಜೋಡಿಸಿಟ್ಟುಕೊಂಡಳು ಮಧುರ.

"ರಾತ್ರಿಗೆ ನೀನೇನೂ ತರಬೇಡ. ನೀನು ಕತ್ತಲಲ್ಲಿ ಬರುವುದು ಸರಿಯಲ್ಲ" ಎಂದ.

"ಹಾಗಾದ್ರೆ ನೀವೇ ಬನ್ನಿ..." ತಟಕ್ಕನೇ ನುಡಿದಳು.

"ನಾನೇನೋ ಬರ್ತೀನಿ. ನಿಮ್ಮ ತಂದೆ ತಾಯಿ ತಪ್ಪಾಗಿ ತಿಳಿದರೆ?"

"ಹಾಗೆ ಭಾವಿಸುವವರಾಗಿದ್ದಿದ್ದರೆ, ಈಗಲೂ ನನ್ನನ್ನು ಕಳಿಸುತ್ತಿರಲಿಲ್ಲ. ನೀವೂ ಮದುವೆ ಮನೆಯಿಂದ ನನಗೆ, ನಮ್ಮಮ್ಮನಿಗೆ ಊಟ ಕಟ್ಟಿಸಿಕೊಂಡು ತಂದುಕೊಡಲಿಲ್ಲವೆ?"

"ಅದರ ಬದಲಿಗೆ ನೀನೀಗ ಮಾಡ್ತಿದೀಯ ಅನ್ನು. ಹಾಗಾದರೆ"

"ನೀವು ಯಾವ ಉದ್ದೇಶವನ್ನಿಟ್ಟುಕೊಂಡು ಮಾಡಿದಿರೋ, ನಾನು ಅದೇ ಉದ್ದೇಶದಿಂದ ಮಾಡ್ತಿದೀನಿ"

"ಅಂದ್ರೆ...."

"ನಿಧಾನವಾಗಿ ಕೂತು ಯೋಚಿಸಿ, ಅರ್ಥವಾಗುತ್ತೆ."

"ಈಗ ಬಿಡುವಿಲ್ಲ. ಯಾವುದೋ ಕೆಲಸವಿದೆ. ನಾನು ಹೊರಡಬೇಕು. ನೀನು ಬರುವುದಾದರೆ ಬಾ. ಬಿಡ್ತೀನಿ"

"ಬೇಡ ಸ್ವಲ್ಪ ಹೊತ್ತು ಇಲ್ಲಿಯೇ ಇರ್ತೀನಿ. ನಿಮ್ಮ ತಾಯಿಗೆ ನನ್ನ ಸಹಾಯ ಬೇಕಾಗಬಹುದು."

"ಅಮ್ಮ ಒಂದು ತರಹ ದುಡುಕು. ಏನಾದ್ರೂ ಅಂದ್ರೆ ಬೇಜಾರಾದೀತು"

ಅದೇನು ಹೊಸದಲ್ಲ ಎಂದು ಹೇಳಬೇಕೆಂದುಕೊಂಡವಳು... "ಪರವಾಗಿಲ್ಲ ದೊಡ್ಡವರು. ಅಲ್ಲದೇ ಪೆಟ್ಟಾಗಿ ಅವರೆಗೆ ಬೇಜಾರಾಗಿದೆ." ಏನಾದ್ರೂ ಅಂದುಕೊಳ್ಳಲಿ.

"ನಿನ್ನಷ್ಟು ಸಹನೆ ನನಗಿಲ್ಲ ಮಧುರ. ನೆನ್ನೆದಿನ ಏನಾಯ್ತು ಗೊತ್ತಾ?"

ನಡೆದಿದ್ದನ್ನು ಹೇಳಲು ಹೊರಟ.

"ಎಲ್ಲೋ ಹೋಗಬೇಕು ಅಂದಿರಲ್ಲ. ಈಗ ತಾನೇ...."

"ಹೂಂ. ಹೋಗ್ತೀನಿ" ಎಂದ.

ಹೊಟ್ಟೆ ತುಂಬಾ ಉಂಡು ತಂದೆ ಮಲಗಿ ಗೊರಕೆ ಹೊಡೆಯುತಿತದ್ದರು.

"ಅಮ್ಮ..... ಸ್ವಲ್ಪ ಕೆಲಸವಿದೆ. ಹೋಗಿ ಬರ್ತೀನಿ. ನೀನಗೇನು ಬೇಕೋ ಮಧುರನ್ನ ಕೇಳು. ನೀನೇ ಎದ್ದು ಹೋಗಬೇಡ." ಆಕೆ ಏನಾದರೂ ಹೇಳುವ ಮೊದಲೇ ಅವನು ಅಲ್ಲಿಂದ ಹೊರಬಿದ್ದ.

ಮಧುರ ರೂಮಿನ ಬಾಗಿಲಿನ ಸಮೀಪದಲ್ಲಿ ಒಂದು ಕುರ್ಚಿಹಾಕಿಕೊಂಡು ಕುಳಿತಳು.

"ನಿಂದು ಊಟ ಆಯ್ತೆ?" ಆಕೆ ಅಲ್ಲಿಂದಲೇ ಕೇಳಿದಳು.

"ಹುಂ. ಆಯ್ತು"

"ಅಡಿಗೆ ಮನೇಲಿ, ದೇವರ ಗೂಡಿನ ಹತ್ತಿರ ಅಡಿಕೆ ಡಬ್ಬಿಇದೆ ತಂದು ಕೊಡ್ತೀಯಾ!" ಮಧುರ ಅಡಿಕೆ ಡಬ್ಬಿಯನ್ನು ತಂದುಕೊಟ್ಟಳು.

"ನೀನು ಬೇಕಾದರೆ ಮನೆಗೆ ಹೋಗು. ಇವರಿದಾರಲ್ಲ. ನೀನು ಇದ್ದರೆ ಅದೇ ಸಾಕು ಅಂತ ಅವರು ಸ್ನೇಹಿತರ ಮನೆಗೆ ಓಡ್ತಾರೆ."

"ಪರವಾಗಿಲ್ಲ. ಸ್ವಲ್ಪ ಹೊತ್ತು ಇರ್ತೀನಿ"

"ನಿನ್ನ ತಂದೆ ತಾಯಿ ಏನಂದು ಕೊಂಡಾರು? ನಮ್ಮ ಕಷ್ಟ ನಮಗೆ. ಹಾಗಂತ ನಿನ್ನಂತಹ ಹುಡುಗೀನ ನಾವುಗೋಳು ಹುಯ್ದುಕೊಳ್ಳಬಾರದು. ಮೋಹನನಿಗೆ ಬುದ್ಧಿ ಇಲ್ಲ. ನಿನಗೆ ಕೆಲಸ ಹೇಳಬಾರದಾಗಿತ್ತು ಅವನು"

"ಪರವಾಗಿಲ್ಲ. ನಮ್ಮ ಮನೇಲಿ ಕೆಲಸ ಮಾಡಲ್ವೆ?"

"ನಿಮ್ಮ ಮನೇಲಿ ನೀನು ಮಾಡುವುದಕ್ಕೂ ಪರರ ಮನೆಯಲ್ಲಿ ಮಾಡುವುದಕ್ಕೂ ವ್ಯತ್ಯಾಸವಿದೆ. ಜನ ಆಡಿಕೊಳ್ತಾರೆ. ನೀನು ಸುಮ್ಮನೇ ಮನೆಗೆ ಹೋಗು."

ಇದ್ದಕ್ಕಿದ್ದಂತೆ ಆಕೆಯ ಧ್ವನಿ ಕರ್ಕಶ ಎನಿಸಿದಾಗ, ಮಧುರ ಮತ್ತೆ ಹೇಳಿಸಿಕೊಳ್ಳಲು ಇಚ್ಛಿಸದೇ ಹೊರಟುಬಿಟ್ಟಳು.

"ಮುಂದಿನಿಂದ ಬೀಗ ಹಾಕಿ, ಬೀಗದ ಕೈನ ಕಿಟಕಿಯಿಂದ ಒಳಗೆ ಎಸೆದುಬಿಡು. ಇವರು ಎದ್ದ ಮೇಲೆ ತೆಗೆಯುತ್ತಾರೆ"

ಅವಳ ಮಾತಿನಂತೆ ಮಧುರ ಮಾಡಿದಳು. ಅನಂತರ ಭವಾನಮ್ಮ ನಿಶ್ಚಿಂತೆಯಿಂದ ಮಲಗಿದಳು.

ರಾತ್ರಿ ಏಳು ಗಂಟೆಯ ಹೊತ್ತಿಗೆ ಮೋಹನ ಮಧುರಳ ಮನೆಗೆ ಬಂದ. ಮಧುರ ಅಡಿಗೆ ಮನೆಯಲ್ಲಿದ್ದಳು. ತಂದೆಯ ಧ್ವನಿ ಕೇಳಿ ಹೊರಗೆ ಬಂದಳು.

"ಪಾಪ, ನಿಮ್ಮ ತಾಯಿಗೆ ಕಾಲು ಉಳುಕಿದೆಯಂತೆ. ಮಧುರ ಹೇಳಿದಳು. ವಯಸ್ಸಾದ ಮೇಲೆ ಇದನ್ನೆಲ್ಲ ಅನುಭವಿಸುವುದು ಕಷ್ಟ"

"ಈಗ ನಿಮಗೆ ಹೇಗಿದೆ?" ಮೋಹನ ಕೇಳಿದ.

"ಹೊರಗಿನ ಗಾಯಗಳೆಲ್ಲ ವಾಸಿಯಾಗಿವೆ. ಮಂದಿನವಾರ ಕಟ್ಟು ಬಿಚ್ತಾರೆ. ಆಮೇಲೆ ಮುಂದೆ ಡಾಕ್ಟರೇ ಹೇಳಬೇಕು."

"ಒಂದಿಷ್ಟು ದಿನ ಕಷ್ಟವಾಗ ಬಹುದು. ಕ್ರಮೇಣ ಸರಿ ಹೋಗುತ್ತೆ" ಎಂದ ಮೋಹನ.

ಮಧುರ ಕ್ಯಾರಿಯರ್‌ಗಳನ್ನು ತಂದಿಟ್ಟಳು. ಅವನು ಸಂಕೋಚಗೊಂಡ.

"ನೀವುಗಳು ಇಲ್ಲಿಯೇ ಊಟ ಮಾಡಬಹುದಾಗಿತ್ತು. ಆದರ ಪಾಪ ನಿಮ್ಮ ತಾಯಿಗೆ ಬರೋಕ್ಕೆ ಆಗೋಲ್ಲವಲ್ಲ"

"ಅವರಿಗೆ ಬರುವುದಕ್ಕೆ ಆಗುವ ಹಾಗಿದಿದ್ದರೆ, ಕ್ಯಾರಿಯರ್ ಊಟಯಾಕೆ? ನಮ್ಮ ಮನೆ ಊಟದ ಮಾತೇ ಬರುತ್ತಿರಲಿಲ್ಲ" ಮಧುರ ನುಡಿದಳು.

"ಹೌದಲ್ವೆ? ಮಯಸ್ಸಾಗ್ತಾ ಆಗ್ತಾ ಏನೇನೋ ಮಾತನಾಡಿ ಬಿಡ್ತಿನಿ ಬುದ್ದಿ ತಕ್ತಿಯೆಲ್ಲ ಎಲ್ಲಿ ಮಾಯವಾಗಿ ಹೋಗುತ್ತೋ" ಆತ ನಕ್ಕಾಗ ಮೋಹನನಿಗೆ ನಗಬೇಕೆನಿಸಲಿಲ್ಲ. ಅವರ ನಗುವಿನಲ್ಲಿ ನೋವು ಇರುವಂತೆ ಅನ್ನಿಸಿತು ಅವನಿಗೆ.

'ಬರ್ತೀನಿ' ಎಂದ ಕ್ಯಾರಿಯರ್‌ಗಳನ್ನು ಎತ್ತಿಕೊಳ್ಳುತ್ತಾ

ಮನೆಗೆ ಬಂದು ಬಿಸಿ ಬಿಸಿಯಾಗಿದ್ದ ಅಡುಗೆ ಪದಾರ್ಥಗಳನ್ನು ಸರಸರನೆ ಬಡಿಸಿದ. ತಾಯಿ ಏನೂ ಆಡದೆ ಮೌನವಾಗಿ ಊಟ ಮಾಡಿದ್ದು ಅಚ್ಚರಿ ಎನಿಸಿತು. ತಂದೆ ಮಾತ್ರ ಹೊಗಳುತ್ತಾ ಊಟ ಮಾಡಿದರು.

ಬೆಳಿಗ್ಗೆ ಎಚ್ಚರವಾದಾಗ, ಅಡೆಗೆ ಮನೆಯಲ್ಲಿ ಯಾರೋ ಕೆಲಸ ಮಾಡುತ್ತಿರುವ ಸದ್ದು ಕೇಳಿಸಿತು. ತಂದೆ ಅಷ್ಟು ಮುಂಚೆ ಏಳುವುದಿಲ್ಲವೆಂದು ಗೊತ್ತು. ಅನುಮಾನದಿಂದ ಎದ್ದು ಬಂದು ಇಣುಕಿದ. ತಾಯಿ ಏನನ್ನೋ ತೊಳೆಯುತ್ತಿದ್ದಳು.

'ತಥ್' ಎಂದುಕೊಂಡು ತನ್ನಪಾಡಿಗೆ ತಾನು ಹೋಗಿ ಮತ್ತೆ ಮಲಗಿದ.

ನಿಧಾನವಾಗಿ ಕಾಲೆಳೆದು ಹಾಕುತ್ತಾ, ಸುಲಭವಾದ ಉಪ್ಪಿಟ್ಟನ್ನು ಕೆದಕಿಟ್ಟು

ಮತ್ತೆ ಬಂದು ಅವನನ್ನು ಎಬ್ಬಿಸಿದಳು ಭವಾನಮ್ಮ.

ಅವನು ಏನನ್ನು ವಿಚಾರಿಸದೇ ತನ್ನ ಪಾಡಿಗೆ ತಾನು ಮುಖ ತೊಳೆದು ಕಾಫಿ ಕುಡಿದು ಸ್ನಾನಕ್ಕೆ ಹೊರಟ. ಅವನ ಉದಾಸೀನ ಅವಳನ್ನು ರೇಗಿಸಿತು. ತಂದೆ ಮಾತ್ರ "ಇದೇನೇ ಎದ್ದುಬಿಟ್ಯಾ! ಕಾಲು ನೋವು ಹೇಗಿದೆ?" ಅಂತ ಕೇಳಿದರು.

"ನನಗೇನಾಗಿದೆ ದಾಡಿ? ಸರಿಯಾಗಿದೀನಿ" ರೇಗಿದಳು. ಮೋಹನ ನಕ್ಕ.

ಹಿಂದಿನ ದಿನದಂತೆ, ಮಧುರ ಹನ್ನೊಂದು ಗಂಟೆಯ ಹೊತ್ತಿಗೆ ಊಟದ ಡಬ್ಬಿಗಳನ್ನು ಹೊತ್ತು ಬಂದಳು.

"ಇವತ್ತು ತಂದಿದ್ದೀಯ ಹೋಗಲಿಬಿಡು. ನಾಳೆಯಿಂದ ಬೇಡ. ನಾನೇ ಎದ್ದು ತಿಂಡಿ ಮಾಡಿದೆ. ಕಾಲುನೋವು ಏನೂ ಇಲ್ಲ. ಹಾಗೇ ಮಲಗಿದ್ರೆ ಜಾಸ್ತಿಯಾಗುತ್ತೆ. ಎದ್ದು ಓಡಾಡಿದ್ರೆ ಹಗುರವಾಗುತ್ತೆ ಅಂತ ಡಾಕ್ಟರು ಹೇಳಿದ್ದಾರೆ"

ಒಂದೇ ಉಸಿರಿಗೆ ಆಕೆ ಹೇಳಿದಾಗ, ಅವಳಿಗೆ ಎಲ್ಲಾ ಅರ್ಥವಾಗಿತ್ತು.

ಈಕೆಯ ಸ್ವಾಭಿಮಾನಕ್ಕೆ ನಾನೇಕೆ ಅಡ್ಡಿ ಬರಬೇಕು? ಎಂದು ಕೊಂಡಳು. ಸ್ವಲ್ಪ ಹೊತ್ತು ಇದ್ದು ಹೊರಟುಹೋದಳು. ತನ್ನ ಕರ್ತವ್ಯ ತಾನು ನಿಭಾಯಿತಿದ್ದೇನೆ ಎನ್ನುವ ತೃಪ್ತಿ ಅವಳಲ್ಲಿತ್ತು.

ಅಲ್ಲಿ ಅವಳ ತಂದೆ, ಇಲ್ಲಿ ಇವನ ತಾಯಿ ಕುಂಟಿಕೊಂಡು, ತಮ್ಮ ತಮ್ಮ ಕೆಲಸಗಳನ್ನು ನಿಭಾಯಿಸತೊಡಗಿದರು. ದಿನಗಳು ಸರಿದವು. ಮಾಲತಿಯ ಮದುವೆಯಾಗಿ ಮೂರು ತಿಂಗಳು ಕಳೆದಿದ್ದವು.

ಒಂದು ದಿನ ರಸ್ತೆಯಲ್ಲಿ ಇದ್ದಕ್ಕಿದ್ದಂತೆ ಕೇಶವ ಎದುರಾದ. ಮೋಹನನನ್ನು ಕರೆದು ನಿಲ್ಲಿಸಿ "ಹಲೋ, ಹೇಗಿದೀರ" ಅಂತ ಕೇಳದ.

"ಅಂದ್ಹಾಗೇ ನಿಮ್ಮ ಮದುವೆ ಆಯಿತಂತೆ. ಕಂಗ್ರಾಟ್ಸ್" ಎಂದ. ಇವನು ಕಕ್ಕಾಬಿಕ್ಕಿ, 'ಇಲ್ಲವಲ್ಲ' ಅಂತ ಹೇಳಹೊರಟವನು. ಗೊತ್ತಾಗಿದೆ.... ದಿನ ನಿಶ್ಚಯವಾಗಿಲ್ಲ. ನನ್ನ ತಂಗಿ, ಮನೋಹರ್ ಬರಬೇಡವೆ? ಎಂದ.

"ನೀವು ತುಂಬಾ ಲಕ್ಕೀ.... ನಿಮ್ಮ ವುಡ್‌ಬೀ ತುಂಬ ಪ್ರೆಟ್ಟೀ" ಎಂದ.

"ಅವನ ತಲೆಗೆ ಎತ್ತಿ ಬೀಸಿ ಹೊಡೆಯುವ ಮನಸ್ಸಾಯಿತು. ಆದರೂ ತಡೆದುಕೊಂಡು 'ಹ್ಲೆ ಹ್ಲೆ' ಎಂದು ಕೆನೆದ."

"ನನಗೂ ಅಂತಹ ಒಬ್ಬ ಪ್ಟೆಟ್ಟಿ ಗರ್ಲ್ ಸಿಗಲಿ ಅಂತ ಎಷ್ಟೋ ವರ್ಷಗಳಿಂದ ಪ್ರಯತ್ನಪಡ್ತಿದೀನಿ. ಸಿಕ್ಕೇ ಇಲ್ಲ. ಅವರ ತಂಗಿಗೆ ಎಷ್ಟು ವರ್ಷ?" ಕೇಳಿದ.

"ಎಷ್ಟೋ ನನಗೆ ಗೊತ್ತಿಲ್ಲ." ಎಂದ ಒರಟಾಗಿ."

"ನೀವೆಲ್ಲೋ ಹೊರಟಿದ್ದಿರೇನೋ ನಾನುನಿಲ್ಲಿಸಿದೆ. ನಿಮ್ಮ ಕಡೆ ಸುಂದರವಾದ ಹುಡುಗಿ ಇದ್ದರೆ ನನಗೆ ತಕ್ಷಣ ತಿಳಿಸಿ. ನಾನೇ ಎಲ್ಲಾ ಖರ್ಚು ಹಾಕಿ ಮದುವೆಯಾಗಲು ಸಿದ್ದ." ಎಂದ.

"ನಿನಗೆ ಹುಚ್ಚು" ಎಂದು ಬೈದುಕೊಂಡು ಮೋಹನ 'ಬರ್ತೀನಿ' ಎಂದು ಸಹ ಹೇಳದೇ ಸೀದಾ ತನ್ನ ಮನೆಗೆ ಬಂದ. ತಂದೆ ಹೊರಗೆ ಹೋಗಿದ್ದರು. ಅಮ್ಮ ಒಬ್ಬಳೇ ಕುಳಿತಿರುವುದನ್ನು ಕಂಡು ಹತ್ತಿರ ಬಂದ ಮೋಹನ್.

"ಅಮ್ಮ.... ನನ್ನ ಮದುವೇನ ನನಗೆ ತಿಳಿಯದಂತೆ ಹೇಗೆ ಗೊತ್ತು ಮಾಡಿದೆ?...." ಕೇಳಿದ.

"ಏನು! ನಿನ್ನ ಮದುವೇನಾ? ಯಾರು ಹೇಳಿದ್ರು?"

"ಇವತ್ತು, ಏನಿಲ್ಲ ಅಂದರೂ, ಮೂರು ನಾಲ್ಕು ಜನ, ನಿನ್ನ ಬೀಗರ ಕಡೆಯವರು ರಸ್ತೆಯಲ್ಲಿ 'ಕಂಗ್ರಾಟ್ಸ್' ಎಂದರು. ಯಾವಾಗ ಮದುವೆ ಅಂತ ಕೇಳಿದರು.

"ಇದೆಂತಹ ತಮಾಷೆ? ನಿನಗೆ ಮದುವೆ ಆಗುವ ಆಸೆ ಇದ್ದರೆ ಬಾಯಿಬಿಟ್ಟು ಹೇಳು. ನಾನು ಹುಡುಗಿಯರನ್ನು ನೋಡ್ತೀನಿ"

"ಈಗ ನೋಡಿ ಗೊತ್ತು ಮಾಡಿರುವ ಹುಡುಗೀನ ಏನು ಮಾಡ್ತಿಯಾ?"

"ಯಾರೋ ಅವಳು? ನನಗೆ ಗೊತ್ತಿಲ್ಲದವಳು. ಯಾರೋ ಬೇಕು ಬೇಕು ಅಂತ ತಮಾಷೆ ಮಾಡ್ತಿದ್ದಾರೆ. ಯಾರಿರಬಹುದು?"

"ಮಾಲತಿಯ ಅತ್ತೆಯ ಮನೆಯ ಕಡೆಯವರು....."

"ಸುಳ್ಳು ಸುದ್ದಿಯನ್ನು ಹುಟ್ಟಿಸಿದವರು ಯಾರು?"

"ನನಗೆ ಗೊತ್ತಿಲ್ಲ. ನೀನು ಹೋಗಿ ನಿಜ ಏನು ಅಂತ ತಿಳಿದುಕೊಂಡು ಬಾ.... ಆದಷ್ಟು ಬೇಗ"

"ನಾನು ಹೋಗಿ ಕೇಳಿದ್ರೆ ನಗಲ್ವೆ! ಸುಮ್ಮನಿದ್ದುಬಿಡೋಣ"

"ಸುಮ್ಮನಿದ್ರೆ, ಇನ್ನೂ ಸ್ವಲ್ಪ ದಿನ ಹೋದಮೇಲೆ ಎಷ್ಟು ಮಕ್ಕಳು ಅಂತ ಕೇಳ್ತಾರೆ ಅಷ್ಟೆ. ಆಗೇನು ಹೇಳ್ತೀಯಾ?"

"ನನಗನ್ನಿಸ್ತಿದೆ, ಮಧುರ ನಮ್ಮ ಮನೆಗೆ ಬಂದು ಹೋಗುವುದನ್ನು ನೋಡಿ ಅವರುಗಳು ತಪ್ಪು ಭಾವಿಸಿರಬಹುದು. ಅದಕ್ಕೇ ನಾನು ಹೊಡೆದುಕೊಳ್ಳುತ್ತಿದ್ದುದು. ಅವಳೇಕೆ ನಮ್ಮ ಮನೆಗೆ ಬರಬೇಕು ಅಂತ?

ಜನರ ಬಾಯಿ ಕೆಟ್ಟದು."

"ಮಾಲತಿ ಅವರ ಮನೆಗೆ ಹೋಗ್ತಿರಲಿಲ್ಲವೇನಮ್ಮ...."

"ಅವರ ಮನೆಯಲ್ಲಿ ಗಂಡು ಮಕ್ಕಳಿಲ್ಲ."

"ಹಾಗಾದರೆ, ನನಗೆ ಮಧುರಂಗೆ ಸಂಬಂಧ ಕಲ್ಪಿಸಿದ್ದಾರೆ ಅಂತೀಯಾ?"

"ಮತ್ತಿನ್ನೇನು? ಕಣಿ ಕೇಳು. ಗಿಣಿಗೆ ಹೇಳಿದ ಹಾಗೆ ಹೇಳಿದೆ... ಅವಳ ತಂದೆಗೆ ಹುಷಾರಿಲ್ಲ ಅಂತ, ಅವಳನ್ನು ಸ್ಕೂಟರಿನ ಮೇಲೆ ಕೂರಿಸಿಕೊಂಡು ತಿರುಗಿದೆ. ನೋಡಿದ ಜನ ಸುಮ್ಮನಿರ್ತಾರೇನೋ?"

"ನನ್ನನ್ನು ಹೀಗೆ ಪ್ರಶ್ನಿಸಿದವರು. ಅವಳನ್ನು ಬಿಡುತ್ತಾರೆಯೆ! ಪಾಪ ಅವಳಿಗೆ ಹೇಗಾಗಲ್ಲ?"

"ಪಾಪ ಏನು? ಹೆಣ್ಣು ಹುಡುಗಿ.... ಅದಕ್ಕೆ ತಕ್ಕ ಹಾಗೆ ಘನತೆಯಿಂದ ಇದ್ದಿದ್ರೆ ಈದಿನ ಈ ಮಾತುಗಳನ್ನು ನಾವು ಆಡಬೇಕಾಗಿರಲಿಲ್ಲ."

"ಅಮ್ಮ ಅವಳು ನಿನ್ನ ಮಗಳ ಸ್ನೇಹಿತೆ..... ನಿನ್ನ ಮಗಳ ತರಹಾನೇ. ಅವಳನ್ನು ಏನೂ ಅನ್ನಬೇಡ. ಅವಳದ್ದಾಗಲೀ ನನ್ನದಾಗಲೀ ಏನೂ ತಪ್ಪಿಲ್ಲ."

"ತಪ್ಪು ನಿಮ್ಮಿಬ್ಬರದ್ದಲ್ಲ. ಜನರ ಕಣ್ಣಿನಲ್ಲಿ ತಪ್ಪು ಇದೆ. ಅನುಭವಿಸು ಜನ ಆಡಿಕೊಳ್ತಾರೆ. ಬಾಯಿಗೆ ಬಂದಂತೆ ಆಡಿಕೊಂಡು ನಗ್ತಾರೆ. ನಾವುಗಳು ತಲೆ ಎತ್ತಿ ತಿರುಗಾಡದ ಹಾಗಾಗುತ್ತೆ ಅಷ್ಟೇ"

"ಬರೀ ನಮ್ಮ ವಿಷಯಾನೇ ಯೋಚಿಸ್ತೀಯಲ್ಲ. ಅವಳ ಕಡೆಯಿಂದಲೂ ಯೋಚಿಸು. ಅವಳ ಮೇಲೆ ಕನಿಕರ ಬೇಡವೇ ನಿನಗೆ!"

"ನನ್ನ ಮಗಳಾಗಿದ್ದಿದ್ದರೆ ನಾಲ್ಕೇಟು ಹೊಡೆದು ಬುದ್ದಿ ಹೇಳಬಹುದಾಗಿತ್ತು"

"ನನ್ನದೂ ತಪ್ಪಿದೆಯಲ್ಲ. ನನಗೂ ಹೊಡೆದು ಬುದ್ಧಿ ಹೇಳು"

"ಏನಂತ ಹೇಳಲಿ?"

"ಆ ಹುಡುಗಿಯನ್ನೇ ಮದುವೆಯಾಗು ಅಂತ" ಕತ್ತೆತ್ತಿ ನೋಡದೇ ನುಡಿದ.

"ಆಂ. ಏನಂದೇ? ಆ ಹುಡುಗೀನ್ನ ಅಂದರೆ ಮಧುರನ್ನ ಮದುವೆಯಾಗು ಅಂತ ನಾನು ಹೇಳಲೆ! ನನಗೆ ಗೊತ್ತಿತ್ತು ಕಣೋ. ಏನೋ ಗುಟ್ಟಿದೆ ಅಂತ. ಅಷ್ಟಲ್ಲದೇ ಇಬ್ಬರೂ ಒಟ್ಟೊಟ್ಟಿಗೆ ಸುತ್ತುತ್ತಿದ್ರಾ! ಅವಳು ಅಡಿಗೆ ಮಾಡಿ ತಂದು ಬಡಿಸಿದ್ದೇನು, ನೀನು ತಿಂದಿದ್ದೇನು! ಆಹಾಹಾ...." ಅವನ ಮುಂದೆ ಕೈ ಕೈ ಆಡಿಸಿದಳು.

"ನೀನೂ ತಿಂದೆಯಲ್ಲಮ್ಮಾ"

"ಹೀಗಿದೆ ಅಂತ ಗೊತ್ತಿದ್ದಿದ್ರೆ ಖಂಡಿತಾ ತಿನ್ನುತ್ತಿರಲಿಲ್ಲ"

"ತಿಂದಾಗಿದೆಯಲ್ಲ. ಮದುವೆಗೆ ಮುಂಚೇನೇ ಅಡಿಗೆ ಮಾಡಿ ಬಡಿಸುವ ಸೊಸೆ ಯಾವ ಅತ್ತೆಗೂ ಸಿಕ್ಕಿಲ್ಲವೇನೋ?"

"ಸಾಕು ತಮಾಷೆ. ಎದ್ದು ಹೋಗು"

"ಇವತ್ತು ಒಂದು ಮಾತು ನಿರ್ಧಾರವಾಗಲೇಬೇಕು. ನನ್ನನ್ನ ಜನ ಏನೇಅಂದರೂ ನಾನು ಕೇರ್ ಮಾಡುವುದಿಲ್ಲ. ಆದರೆ ನಮಗೆ ಏನೂ ತೊಂದರೆ ಮಾಡದ, ಮಧುರಂಗಾಗಲೀ ಅವರ ಮನೆಯವರಿಗಾಗಲೀ ಅನ್ಯಾಯವಾಗುವುದನ್ನು ನಾನು ಸಹಿಸುವುದಿಲ್ಲ. ನಾನು ಅವಳನ್ನು ಮದುವೆಯಾಗುವುದಾಗಿ ತೀರ್ಮಾನಿಸಿದೀನಿ"

"ನಾನು ಒಪ್ಪಿಗೆ ಕೊಡದಿದ್ದರೂ ಅವಳನ್ನು ಮದುವೆಯಾಗ್ತೀಯ ಅನ್ನು"

"ಹಾಗೆ ಮಾಡಲು ನನಗೆ ಸುತರಾಂ ಇಷ್ಟವಿಲ್ಲ. ನೀನು ಒಪ್ಪಿ ಆಶೀರ್ವಾದ ಮಾಡಲಿ ಅಂತಲೇ ನನ್ನ ಆಸೆ. ಒಂದುವೇಳೆ ಒಪ್ಪಲಿಲ್ಲ ಅಂತಿಟ್ಕೋ. ನಿನ್ನ ಮಗನಿಗೆ ಈ ಜನ್ಮದಲ್ಲಿ ಮದುವೆಯಿಲ್ಲ. ನಿನ್ನ ಮನೆಗೆ ಸೊಸೆ ಬರುವುದಿಲ್ಲ."

"ಅಂತಹ ಸೊಸೆ ನನ್ನ ಮನೆಗೆ ಬರುವುದೂ ಬೇಡ"

"ಏನಾಗಿದೆ ಅವಳಿಗೆ? ಏನಾಗಿದ್ದಾಳೆ ಅವಳು? ಮನೋಹರನ ಸ್ನೇಹಿತರು ಅವಳಿಗಾಗಿ ಕಾದು ನಿಂತಿದ್ದಾರೆ. ಇವತ್ತು ಅಂದರೆ ಇವತ್ತು. ಈ ಕ್ಷಣ ಅಂದರೆ ಈ ಕ್ಷಣ ಅವಳನ್ನು ಮದುವೆಯಾಗಲು ಸಿದ್ಧವಾಗಿದ್ದಾರಂತೆ... ನಿನಗೇ ಗೊತ್ತು. ಅವಳು ಮಾಲತಿಗಿಂತ ರೂಪವಂತೆ, ಅವಳಿಗಿಂತ ಚೆನ್ನಾಗಿ ಹಾಡ್ತಾಳೆ. ಮನೆ ಕೆಲಸ, ಅಡಿಗೆ ಮಾಡ್ತಾಳೆ. ನಿನಗಿಂತ ಹೆಚ್ಚಿನ ಸಹನೆ ಅವಳಿಗಿದೆ. ಇದಕ್ಕಿಂತ ಒಳ್ಳೆಯಗುಣಗಳಿರುವ ಸೊಸೆ ನಿಮಗೆ ಈ ಜನ್ಮದಲ್ಲಿ ಸಿಗುವುದಿಲ್ಲ"

"ನಾನು ಹುಡುಕಿ ನಿನಗೆ ಮದುವೆ ಮಾಡ್ತೀನಿ"

"ಹುಂ. ಯಾರೋ ಪಂಡಿತ ಜಾತಕಗಳನ್ನು ನೋಡಿ ಹೊಂದುತ್ತೆ ಅಂತಾನೆ. ಫೋಟೋ ನೋಡಿ ಚೆನ್ನಾಗಿದ್ದಾಳೆ ಅಂದುಕೊಳ್ತೀಯ. ದೂರದಿಂದ ಅವಳ ಮುಖ ನೋಡಿ ರೂಪವತಿ ಅಂತ ಬಾಯಿಬಿಡ್ತೀನಿ. ಮುಖದ ಸೌಂದರ್ಯ ಕಾಣುತ್ತೆ. ಮನಸ್ಸು ಹೇಗಿದೆ ಅಂತ ನಮಗೆ ಹೇಗೆ ತಿಳಿಯುತ್ತೆ?"

"ಮಧುರ ಸಹ ಒಳ್ಳೆಯ ಹುಡುಗಿ ಅಂತ ಹೇಗೆ ಹೇಳ್ತೀಯಾ? ಮಾಲತಿಯ ಸ್ನೇಹಿತೆ ಇರಬಹುದು. ನಮ್ಮ ಮನೆಯ ಅನುಕೂಲಗಳು ಅವಳನ್ನು ಆಕರ್ಷಿಸಿರಬಹುದು. ನಮ್ಮನ್ನು ಮೆಚ್ಚಿಸಲು ಹಾಗೆ ವರ್ತಿಸಿರಬಹುದು"

"ಅಮ್ಮ ನಿನಗೆ ಇನ್ನು ನಾನು ಏನೂ ಹೇಳಬಾರದು. ಅವಳು ಹತ್ತುವರ್ಷದ ಹುಡುಗಿಯಾದಾಗಿನಿಂದ ನೋಡಿದೀಯ. ಅವಳ ಸ್ವಭಾವ ಏನು ಅಂತ ನಿನಗೆ ತಿಳಿದಿಲ್ಲವಾದರೆ, ನಾನು ಏನು ಹೇಳಲಿ? ಹಾಗೆ ಅವಳ ಗುಣವಾಗಿದ್ದಿದ್ದರೆ, ನಮಗಿಂತ ಶ್ರೀಮಂತರು ಇಲ್ಲವೆ? ನಾವು ಶ್ರೀಮಂತರೂ ಅಲ್ಲ. ಅವರು ಬಡವರೂ ಅಲ್ಲ, ಅವರು ಸುಖವಾಗಿದ್ದಾರೆ. ನಮ್ಮ ಪಾಡಿಗೆ ನಾವು ಇದೀವಿ. ನಮ್ಮ ಹತ್ತಿರ ಕಾರು ಇದೆಯೆ? ಬಂಗಲೆ ಇದೆಯೆ? ಒಂದು ವೇಳೆ ಮಾಲತಿಯ ಬಗ್ಗೆಯೂ ಯಾರಾದರೂ ಇದೇ ಅಭಿಪ್ರಾಯಪಟ್ಟರೆ ನಿನಗೆ ಹೇಗನ್ನಿಸಬಹುದು ಯೋಚಿಸು. ಇನ್ನು ನಿನ್ನ ಹತ್ತಿರ ಏನನ್ನು ಆಡುವ ಮನಸ್ಸು ನನಗಿಲ್ಲ." ಎಂದು ಹೇಳಿ ರೂಮಿಗೆ ಹೋಗಿ ಬಾಗಿಲನ್ನು ಭದ್ರಪಡಿಸಿಕೊಂಡ.

ಅಮ್ಮನ ಸಣ್ಣತನಕ್ಕೆ ಅವನಿಗೆ ಹೇಸಿಗೆ ಎನಿಸಿತ್ತು. ಅದೂ ಮಧುರಳಂಥ ಹುಡುಗಿಯ ಮೇಲೆ. ಅವಳು ಈ ಮನೆಗೆ ಸೊಸೆಯಾಗಿ ಬರದಿದ್ದರೂ ಸರಿ. ಬಂದು ಅಮ್ಮನ ಹರಿತದ ಮಾತುಗಳಿಗೆ ಈಡಾಗುವುದು ಬೇಡ ಎನಿಸಿತ್ತು.

ಒಂದು ವಾರ ಕಳೆದರೂ, ಮಗ ತಾಯಿಯೊಡನೆ ಮಾತನಾಡಲಿಲ್ಲ. ಇದು ಆಕೆಗೆ ಸಹಿಸಲು ಅಸಾಧ್ಯ. ವಾತನಾಡಿಸಲು ಪ್ರಯತ್ನಿಸಿದಾಗಲೆಲ್ಲಾ ಅವನು ಎದ್ದು ಹೋಗಿದ್ದ. ಆ ಮಾಯಾಂಗನೆಗಾಗಿ ನನ್ನ ಮೇಲೆ ದ್ವೇಷ ಎಂದು ಕೋಪಗೊಂಡಿದ್ದಳು.

ಈ ಮಧ್ಯೆ ಮಾಲತಿಯ ಕಾಗದ ಬಂದಿತ್ತು. ತನಗೆ ಹುಷಾರಿಲ್ಲವಾದ್ದರಿಂದ ರೆಸ್ಟ್ ಬೇಕಾಗಿದೆ. ತಾನು ಊರಿಗೆ ಬರುತ್ತಿದ್ದೇನೆಂದು ತಿಳಿಸಿ, ಏರ್‌ಪೋರ್ಟ್‌ಗೆ ಮೋಹನನನ್ನು ಕಳಿಸಬೇಕು ಎಂದು ಬರೆದಿದ್ದಳು. ತಾಯಿಗೆ ಇದು ಸಂಭ್ರಮದ ಸಂಗತಿ. ಈ ನೆವದಲ್ಲಿ ತಾವುಗಳು ಮತ್ತೆ ಸರಿಯಾಗಬೇಕು ಎನ್ನುವ ಆಸೆ. ಮಾಲತಿ ಮೋಹನನಿಗೆ ತಿಳುವಳಿಕೆ ಹೇಳುವಂತೆ ಮಾಡಬೇಕು ಎಂದು ತನಗೆ ತಾನೇ ಹೇಳಿಕೊಂಡಳು.

ಮಾಲತಿಯನ್ನು ಏರ್‌ಪೋರ್ಟಿನಿಂದ ಮನೆಗೆ ಕರೆದುಕೊಂಡು ಬರಲು ಮೋಹನನೇ ಹೊರಟ. ಟ್ಯಾಕ್ಸಿಯಲ್ಲಿ ಬರುವಾಗ ತಮಾಷೆ ಮಾಡಿದ್ದ.

"ಏನೇ, ಒಂದು ಸುತ್ತು ಮೈ ಬಂದಿರುವ ಹಾಗಿದೆ. ಸುಮ್ಮನೇ ತಿಂದ್ಕೊಂಡು ಮಲಕ್ಕೊಂಡು ಕಾಲ ಕಳೆದೆಯೇನೋ? ನಿನ್ನ ಕಾಗದ ಬಂದಾಗಿನಿಂದ, ಮಗಳಿಗೇನಾಯ್ತೋ ಅಂತ ಕೊರಗಿ ಕೊರಗಿ ಅಮ್ಮ ಕೃಶವಾಗಿದ್ದಾಳೆ"

"ಸಾಕು ತಮಾಷೆ. ಅಪ್ಪ ಹೇಗಿದ್ದಾರೆ?"

"ಅವರು ಒಂದೇ ತರಹ. ಈ ಅಮ್ಮನ ಕಿರಿಕಿರಿ ಜಾಸ್ತಿಯಾಗಿದೆ"

"ಸೊಸೆಗಿಂತ ಹೆಚ್ಚಾಗಿ ನೀನೇ ಆಕ್ಷೇಪಣೆ ಮಾಡ್ತಿಯಲ್ಲೋ?"

"ಏನು ಮಾಡಲಿ, ಹಾಗೆ ರೇಗಿಸ್ತಾಳೆ. ಕಾಲು ಉಳುಕಿದ್ದಾಗಲಂತೂ ತನ್ನ ಪಾಡಿಗೆ ತಾನು ಮಲಗಿರುವುದು ಬಿಟ್ಟು ಗೊಣಗಾಟ ಜಾಸ್ತಿ ಮಾಡಿದಳು. ನಾವೇನೋ ಮನೆಯವರು..... ಆದರೆ ಮಧುರನ್ನ ಅಂದಿದ್ದು ನನಗೆ ಸರಿ ಎನಿಸಲಿಲ್ಲ"

"ಛೆ, ಯಾಕೆ ಹಾಗೆ ಆಡಿದಳು! ಏಕೋ ಏನೋ ಅವಳಿಗೆ ಮೊದಲಿನಿಂದಲೂ ಮಧುರಳನ್ನು ಕಂಡರೆ ಅಷ್ಟಕಷ್ಟೇ...."

"ಸರಿ, ನೀನು ಬೇರೆ ಕಿತಾಪತಿ ಮಾಡಿಬಿಟ್ಟದೀಯ. ಆ ಕೇಶವ ಇತ್ತೀಚೆಗೆ ಸಿಕ್ಕಾಗ, ಮದುವೆ ಆಯ್ತಂತೆ. ಅಂತಲೇ ಅಂದ. ಸುಮ್ಮನೇ ಮಧುರನ್ನ ಹೊಗಳಿ ನನ್ನ ತಲೆ ಕೆಡಿಸಿಬಿಟ್ಟ. ನಾನು ಅಮ್ಮನ ಹತ್ತಿರ ಕೇಳಿದ್ದೇ ಒಂದು ದೊಡ್ಡ ರಂಪವಾಗಿ ಹೋಯ್ತು. ಯಾವುದಾದರೂ ಬೇರೆ ಊರಿಗೆ ಹೊರಟುಹೋಗೋಣ ಎನ್ನಿಸಿಬಿಟ್ಟಿದೆ."

ಮಾಲತಿಗೆ ಏನು ಹೇಳಬೇಕೆಂದು ತೋಚಲಿಲ್ಲ. ಸುಮ್ಮನಾದಳು.

"ಈಗ ಒಂದು ಕೆಲಸ ಮಾಡು. ಮೊದಲು ನನ್ನನ್ನು ನಮ್ಮ ಅತ್ತೆ ಮನೆಗೆ ಕರೆದುಕೊಂಡು ಹೋಗು. ಈ ದಿನ ಅಲ್ಲಿದ್ದು ನಾಳೆ ಬರ್ತೀನಿ"

ಅವನು ಹಾಗೇ ಮಾಡಿದ. ಅವನು ಒಬ್ಬನೇ ಬಂದುದನ್ನು ಕಂಡು ಭವಾನಮ್ಮ ಗಾಭರಿಯಾದಳು.

"ಯಾಕೋ ಮಾಲತಿ ಬರಲಿಲ್ವೆ? ಪ್ಲೇನು ಬರಲಿಲ್ವೆ?" ಕೇಳಿದಳು.

"ಅವಳನ್ನು ಅವಳ ಅತ್ತೆಮನೆಗೆ ಬಿಟ್ಟು ಬಂದೆ. ಅವಳೇ ಹೇಳಿದಳು"

ಮಗಳು ಸೀದಾ ತನ್ನ ಮನೆಗೆ ಬರದೇ ಗಂಡನ ಮನೆಗೆ ಹೋದುದರಿಂದ ಮನಸ್ಸು ಚುಳ್ ಎಂದಿತು. ಆದರೂ

"ಒಳ್ಳೆದಾಯ್ತು ಬಿಡು. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಅಂತ.

"ಈಗೇನಾಯ್ತು! ಒಂದೆರಡು ದಿನ ಅಲ್ಲಿದ್ದು ಬರಲಿ. ಸಾಯಂಕಾಲ ನಾವುಗಳೇ ಹೋಗಿ ನೋಡಿ, ಮಾತನಾಡಿಸಿಕೊಂಡು ಬಂದರೆ ಆಯ್ತು" ತಂದೆ ನುಡಿದಾಗ ಅವನಿಗೆ ಹಿತವೆನಿಸಿತ್ತು. ಇಬ್ಬರ ಮಾತಿನಲ್ಲೂ ಅದೆಷ್ಟ ವ್ಯತ್ಯಾಸ ಎಂದುಕೊಂಡ.

ಸಾಯಂಕಾಲ ತಂದೆ–ತಾಯಿ ಮಗಳನ್ನು ನೋಡಲು ಹೊರಟನಂತರ

ಇವನು ಮಧುರಳ ಮನೆ ಕಡೆ ಹೊರಟ. ಮಾಲತಿ ಬಂದಿರುವಾಗ, ಮಧುರಳ ಒಪ್ಪಿಗೆ ತಿಳಿದುಕೊಳ್ಳಬೇಕೆಂಬ ಆಸೆಯಾಗಿತ್ತು.

"ಮಾಲತಿ ಊರಿಗೆ ಬಂದಿದ್ದಾಳೆ" ಎಂದ.

"ಹೌದಾ? ಗೊತ್ತೇ ಇರಲಿಲ್ಲ. ಕಾಗದದಲ್ಲಿ ಬರೆದಿರಲಿಲ್ಲ"

"ದಿಢೀರನೇ ಹೊರಟು ಬಂದಿದ್ದಾಳೆ. ಏನೋ ಹುಷಾರಿರಲಿಲ್ಲವಂತೆ. ಈಗ ಸದ್ಯಕ್ಕೆ ಅತ್ತೆಯ ಮನೇಲಿದ್ದಾಳೆ. ನಾಳೆ ನಾಡಿದ್ದರಲ್ಲಿ ನಮ್ಮ ಮನೆಗೆ ಬರ್ತಾಳೆ. ಅವಳನ್ನು ನೋಡಕ್ಕೆ ಬರ್ತೀಯಾ ಅಲ್ವಾ!"

"ಖಂಡಿತಾ.... ಬರ್ತೀನಿ"

"ನಾನು ಬೇರೆ ಊರಿಗೆ ವರ್ಗ ಮಾಡಿಸಿಕೊಂಡು ಹೋಗೋಣ ಅಂತ ಅಂದ್ಕೊಂಡಿದೀನಿ"

"ಯಾಕೆ? ಏನಾಯ್ತು?" ಆತಂಕದಿಂದ ಕೇಳಿದಳು.

"ಏಕೋ ಈ ಊರು, ಈ ಪರಿಸರ ಬೇಜಾರಾಗ್ತಿದೆ. ಒಂದೇ ತರಹದ ಜೀವನ ಬೇಡ, ಬದಲಾವಣೆ ಬೇಕು ಅಂತ ಅನ್ನಿಸ್ತಿದೆ."

"ಅಷ್ಟಕ್ಕೋಸ್ಕರ, ಊರು, ಮನೆ, ಅಪ್ಪ, ಅಮ್ಮನ್ನ ಬಿಟ್ಟು ದೂರ ಹೋಗ್ತೀರಾ! ಒಂಟಿತನ ಅದಕ್ಕಿಂತ ದುಸ್ತರ....."

"ಒಂಟಿಯಾಗಿ ಏಕೆ ಹೋಗಲಿ? ಮದುವೆ ಮಾಡಿಕೊಂಡು ಹೆಂಡತಿಯನ್ನು ಜತೆಯಲ್ಲಿ ಕರೆದುಕೊಂಡು ಹೋಗ್ತೀನಿ"

ಮಧುರ ತಟಸ್ಥಳಾದಳು. ಮುಂದೆ ಅವನೇನು ಕೇಳಿಬಿಡುತ್ತಾನೋ, ತಾನು ಏನುತ್ತರ ಕೊಡಬೇಕಾಗುತ್ತದೋ ಎಂದು ಉದ್ವೇಗಗೊಂಡಳು.

"ಹೇಗೂ ಮಾಲತಿ ಬಂದಿದ್ದಾಳೆ. ನನಗೆ ಹೆಣ್ಣು ಹುಡುಕುವ ಕೆಲಸ ಅವಳದ್ದು. ಅವಳು ಒಪ್ಪಿದವಳನ್ನು ನಾನು ಕಣ್ಣು ಮುಚ್ಚಿಕೊಂಡು ಮದುವೆಯಾಗ್ತೀನಿ"

ಅವಳು ಮೌನಿ.

"ಯಾಕೆ ಮಧುರ ಏನನ್ನೂ ಹೇಳ್ತಿಲ್ಲ?"

"ನಾನೇನು ಹೇಳಲಿ!"

"ಅದೂ ಸರಿಯೆ. ನನಗೆ ಎಂತಹವಳು ಒಪ್ಪಿಗೆಯಾಗ್ತಾಳೆ ಅಂತ ನೀನು ಹೇಗೆ ಹೇಳಬಲ್ಲೆ? ಮಾಲತಿಗಾದರೆ ಗೊತ್ತಿರುತ್ತೆ"

ಅವನು ಹೋದರೆ ಸಾಕು ಎನ್ನುವಂತೆ ಚಡಪಡಿಸತೊಡಗಿದಳು. ಅವನಿಗೆ ನಗುಬಂತು. "ನನಗೊಂದು ಲೋಟ ನೀರು ಕೊಡ್ತೀಯಾ" ಎಂದು

ಅವನು ಕೇಳಿದ್ದೇ ಸಾಕು ಎನ್ನುವಂತೆ ಅಡಿಗೆ ಮನೆಗೆ ಓಡಿದಳು. ಗೋಡೆಗೆ ಒರಗಿ ನಿಂತು ಬರಲಿರುವ ಕಣ್ಣೀರನ್ನು ತಡೆದುಕೊಂಡಳು. ರಾಗಿಣಿಯನ್ನು ಕರೆದು ಅವಳ ಕೈಲಿ ನೀರನ್ನು ಕಳಿಸಿದಳು.

"ಅವನಿಗೆ ಬೇಕಾದ ಉತ್ತರ ಸಿಕ್ಕಿತ್ತು." ಆದರೂ ಅದನ್ನು ತೋರಗೊಡದೇ.

"ಏನೇ ಗಿಣಿ ಹೇಗಿದಿಯಾ! ಪರೀಕ್ಷೆ ಯಾವಾಗ?" ಪ್ರಶ್ನಿಸಿದ.

ರಾಗಿಣಿ ಉತ್ತರಿಸಿದಳು. ಮಧುರ ಎಷ್ಟು ಹೊತ್ತಾದರೂ ಹೊರಗೆ ಬಾರದಿದ್ದಾಗ ಅವನೇ ಅಡಿಗೆ ಮನೆ ಬಾಗಿಲಿಗೆ ಬಂದು ನಿಂತ. "ನಾನಿನ್ನು ಬರಲಾ!" ಕೇಳಿದ

ಅವಳು ಬೆಚ್ಚಿಗಕ್ಕನೆ ತಿರುಗಿದಳು.

"ಹುಂ ಮಾಲತಿ, ನಿಮ್ಮ ಮನೆಗೆ ಬಂದ ಮೇಲೆ, ಅವಳನ್ನು ನೋಡಲು ಬರ್ತೀನಿ. ಹಾಗಂತ ತಳಿಸಿಬಿಡಿ" ಎಂದಳು. 'ಎಲಾ ಇವಳಾ!' ಎಂದು ಕೊಂಡ. ಮಧುರಂಗೆ ಕಾಣುವಂತೆ ರಾಗಿಣಿಯ ಕೆನ್ನೆ ತಟ್ಟಿ 'ಬರ್ತೀನೇ ಗಿಣಿ' ಎನ್ನುತ್ತಾ ನಡೆದ.

ಮಧುರ ರಾಗಿಣಿಯ ಕೆನ್ನೆಗಳನ್ನೇ ನೋಡಿದಳು. ಓಡಿಹೋಗಿ ಅವನನ್ನು ತಡೆದು ನಿಲ್ಲಿಸುವ ಮನಸ್ಸಾಯಿತಾದರೂ ತಡೆದುಕೊಂಡಳು. ಬಾಗಿಲನ್ನು ದಾಟಿ ಹೋಗುವ ಮುಂಚೆ ಅವನು ಹಿಂತಿರುಗಿ ನೋಡಿದ್ದ.

ಆಟೋದಿಂದ ಅವಳ ತಂದೆ ತಾಯಿ ಇಳಿದರು. ಮೋಹನ ಮುಂದಾಗಿ ಹೋಗಿ ಅವರಿಗೆ ಇಳಿಯಲು ಸಹಾಯ ಮಾಡಿ, ಅವರನ್ನು ಮನೆಗೆ ತಲುಪಿಸಲೆಂದು ಮತ್ತೆ ಮನೆಯೊಳಕ್ಕೆ ಬಂದ.

"ಅಬ್ಬಾ, ಇವತ್ತಿಗೆ ಗೆದ್ದೆ. ಎಕ್ಸ್‌ರೇ ತೆಗೆದು, ಸರಿಯಾಗಿದೆ. ಇನ್ನೇನೂ ಚಿಂತೆ ಇಲ್ಲ ಎಂದರು" ಎಂದರು ಶೇಷಾದ್ರಿ. ಇವನು ಅವರನ್ನೇ ಸುಮ್ಮನೆ ನೋಡಿದ.

"ಕೂತ್ಕೊಳಯ್ಯಾ" ಎಂದರು ತಾವು ಕೂಡುತ್ತಾ

"ಪರವಾಗಿಲ್ಲ. ನಾನು ಹೊರಟಿದ್ದೆ. ಮಾಲತಿ ಬಂದಿದ್ದಾಳೆ. ಹೇಳಿಹೋಗೋಣ ಅಂತ ಬಂದಿದ್ದೆ."

"ಓ! ಹುಷಾರಾಗಿದ್ದಾಳೆ ತಾನೆ?"

"ಹುಂ, ಅತ್ತೆಮನೇಲಿದ್ದಾಳೆ. ನಾಳೆ ನಮ್ಮಮನೆಗೆ ಬರ್ತಾಳೆ"

"ಒಳ್ಳೆಯದಾಯ್ತು. ನಮ್ಮ ಮಧುರಂಗೂ ಬೇಜಾರು ಕಳೆಯುತ್ತೆ. ಇವಳಂತೂ

ಬೆಂಗಳೂರು ಬಿಟ್ಟು ಎಲ್ಲಿಯೂ ಹೋಗೇ ಇಲ್ಲ. ಅವಳು ಉತ್ಸಾಹದಿಂದ ಎಲ್ಲಾಹೇಳ್ತಾಳೆ. ಇವಳು ಸಹನೆಯಿಂದ ಎಲ್ಲಾ ಕೇಳ್ತಾಳೆ"

ಆ ಮಾತಿನಲ್ಲಿ ಅಭಾವದ ಎಳೆಯನ್ನು ಕಂಡ. ಆದರೂ ಮಧುರಂಗೆ ಮದುವೆ ಮಾಡ್ತೀನಿ ಎನ್ನುವ ಮಾತನ್ನು ಆತ ಇದುವರೆಗೂ ಎಂದೂ ಆಡಿಯೇ ಇಲ್ಲ. ಎನ್ನುವುದನ್ನು ಗಮನಿಸಿದ್ದ. ಹಾಗಿದ್ದರೆ ಈ ಮನೆಯಿಂದ ಅವಳನ್ನು ಹೊರತರುವುದೂ ಕಷ್ಟ. ಆ ಮನೆಗೆ ಅವಳನ್ನು ಸೇರಿಸುವುದೂ ಕಷ್ಟ ಎಂದುಕೊಂಡ. ಈಗ ತನಗೆ ಮಾಲತಿಯೇ ಸಹಾಯ ಮಾಡಬೇಕು. ಇಲ್ಲದಿದ್ದರೆ ತಾನು ಅಮ್ಮನಿಗೆ ಹೆದರಿಸಿದ ಮಾತು ನಿಜವಾಗಿ ಬಿಡುತ್ತದೆ ಎಂದು ಕೊಂಡ.

ಎರಡು ಮೂರುದಿನಗಳ ನಂತರ ಮಾಲತಿ ತಾಯಿಯ ಮನೆಗೆ ಬಂದಳು. ತಾಯಿ ಉಪಚಾರ ಪ್ರಾರಂಭಿಸಿದಳು.

"ನಾಳೆ ಮೊದಲು ಚೆನ್ನಾಗಿ ಹರಳೆಣ್ಣೆ ಒತ್ತಿಕೊಂಡು ನೀರು ಹಾಕ್ಕೋ. ಮೈಯಲ್ಲಾ ಒಣಗಿಹೋಗಿದೆ. ನಿನ್ನ ಕೈನ ಅಡಿಗೆ, ಅದೇನು ಮಾಡಿಕೊಂಡು ತಿನ್ನುತ್ತಿದ್ದಿರೋ ಅಥವಾ ಹೋಟೆಲ್ಲು ಅಂತ ತಿರುಗಾಡುತ್ತಿದ್ದಿರೋ.... ಅಲ್ಲ ಕಣೇ. ಸೀದಾ ಇಲ್ಲಿಗೆ ಬರಬೇಡವೆ! ಅವರೇನು ನಿನಗೆ ಇಷ್ಟವಾದ ಅಡಿಗೆ ಮಾಡಿ ಹಾಕಿರುತ್ತಾರೆಯೆ! ನಿನಗೇನು ಬೇಕೋ ಕೇಳು. ಮಾಡಿಕೊಡ್ತಿನಿ" ಎಂದು ಕಕ್ಕುಲತೆ ತೋರಿದಳು ಭವಾನಮ್ಮ.

"ಸುಮ್ಮನೆ ಇನ್ನೊಬ್ಬರನ್ನು ಯಾಕಮ್ಮ ಆಕ್ಷೇಪಣೆ ಮಾಡ್ತಿಯಾ..... ಅವರು ಮಾಡುತ್ತಿದ್ದ ಅಡಿಗೆ ಚೆನ್ನಾಗೇ ಇರುತ್ತಿತ್ತು"

"ಆದರೇನು ನಮ್ಮ ಮನೆ ರುಚಿಗೂ ಅವರ ಮನೆ ರುಚಿಗೂ ವ್ಯತ್ಯಾಸವಿದ್ದೇ ಇರುತ್ತೆ. ನಿನಗೆ ಖಂಡಿತಾ ಸೇರಿರಲ್ಲ"

"ಮಧುರನ ತಾಯಿ ಮಾಡುವ ರುಚಿ, ಯಾರ ಅಡಿಗೆಗೂ ಇರೊಲ್ಲ" ಎಂದು ಮಾಲತಿ ನುಡಿದಾಗ ಭವಾನಮ್ಮನ ಮುಖ ಪೆಚ್ಚಾಯಿತು.

"ಅದೇನೇನು ಮಸಾಲೆ ಹಾಕ್ತಾರೋ ಹೇಳು. ಅದನ್ನೇ ಹಾಕಿ ಮಾಡ್ತೀನಿ"

"ಪರವಾಗಿಲ್ಲ ಬಿಡಮ್ಮ. ಅದು ನಿನಗೆ ಇಷ್ಟವಿಲ್ಲದ ಕೆಲಸ ಅಂತ ನನಗೂ ಗೊತ್ತು. ನಾನು ಅವಳ ಮನೆಗೇ ಹೋಗಿ ಬಂದು ದಿನ ಊಟ ಮಾಡಿದ ರಾಯ್ತು."

"ಸುಮ್ಮನೇ ಬಂದೋಳೇ ಅಲ್ಲಿ ಇಲ್ಲಿ ಅಂತ ತಿರುಗಬೇಡ. ಅಲ್ಲದೇ ನಿನ್ನ ಅತ್ತೆ ಮನೆಯವರು ಏನಂದುಕೊಂಡಾರು!"

"ಹಾಗಾದ್ರೆ ನಾನು ಇಲ್ಲಿ ಇರುವಷ್ಟು ದಿನವೂ ಮಧುರನ್ನ ಇಲ್ಲಿಯೇ ಇಟ್ಟು ಕೊಳ್ತೀನಿ"

"ಅಣ್ಣ ತಂಗಿಯರಿಬ್ಬರಿಗೂ ಅದೇನೋ, ಅವಳ ಹುಚ್ಚು ಹಿಡಿದಿದೆ ಅಂತ ಕಾಣಿಸುತ್ತೆ. ಅವಳು ಮದುವೆಯಾಗಿ ಗಂಡನ ಮನೆಗೆ ಹೊರಟುಹೋದರೆ ಏನ್ಮಾಡ್ತೀರಿ!"

"ಅವಳನ್ನು ಯಾರು ಮದುವೆಯಾಗ್ತಾರೆ?"

"ಥೂ! ಏನೇ ಹೀಗಂತೀಯಾ? ಏನಾಗಿದೆ ಅವಳಿಗೆ. ಎಲ್ಲಾದರಲ್ಲೂ ಸರಿಯಾಗಿದ್ದಾಳಲ್ಲ?" ಮಾಲತಿ ಬೆರಗಾದಳು.

"ಮೊಟ್ಟ ಮೊದಲ ಬಾರಿಗೆ ಅವಳನ್ನು ಹೊಗಳಿದೆಯಲ್ಲ"

"ತೆಗಳುವಂತಹ ಕೆಲಸ ಮಾಡಿದರೆ, ಬಾಯ್ತುಂಬಾ ತೆಗಳ್ತೀನಿ. ಆದರೂ ನೀನು ಆಡಿದ ಮಾತು ಸರಿಯಲ್ಲ. ನೀನಾದರೂ ಸ್ವಲ್ಪ ತಿಳುವಳಿಕೆ ಹೇಳು. ಅವರಪ್ಪ ಅಮ್ಮ ಅವಳಿಗೆ ಏನೂ ಹೇಳೋಲ್ಲ ಅಂತ ಕಾಣಿಸುತ್ತೆ. ಚಿಕ್ಕವಯಸ್ಸಿನಲ್ಲೂ ಮೋಹನ ಅವಳ ಜತೆ ಇಷ್ಟು ಸಲಿಗೆಯಿಂದಿರಲಿಲ್ಲ. ಈಗ ಬೇಡ ಅಂದ್ರೂ ಅವಳು ಬರ್ತಾಳೆ. ಇವನು ಬಿಟ್ಟು ಬರುತ್ತೀನಿ ಅಂತ ಹೋಗ್ತಾನೆ. ಅವರಪ್ಪನಿಗೆ ಆಕ್ಸಿಡೆಂಟ್ ಆಯ್ತುನೋಡು ಆಗಿನಿಂದ ಹೀಗೇ..... ಜನ ಏನಾದರೂ ಪುಕಾರು ಹಬ್ಬಿಸದೇ ಬಿಡುವುದಿಲ್ಲ. ನಿನ್ನ ಅತ್ತೆಮನೆ ಕಡೆಯುವರು, ಅವಳನ್ನೇ ಇವನ ಹೆಂಡತಿ ಅಂತ ತಿಳಿದುಕೊಂಡಿದ್ದಾರಂತೆ. ಇವನೂ ಹಾಗೆ ಆಡ್ತಾನೆ. ಅವನ ಮನಸ್ಸಿನಲ್ಲಿ ಏನಿದೆ ಅಂತ ಸರಿಯಾಗಿ ಕೇಳಿ ತಿಳಕೋ, ನನಗಂತೂ ಹೇಳೋಲ್ಲ. ಅಬ್ಬರಿಸುತ್ತಾನೆ" ಭವಾನಮ್ಮ ಮಗಳ ಬಳಿ ದೂರಿದರು.

ತಾಯಿಯ ಮಾತಿನ ವೈಖರಿಗೆ ಮಾಲತಿಗೆ ನಗು ಬಂತು. ಅವರಿಬ್ಬರೂ ಒಬ್ಬರನೊಬ್ಬರು ಮೆಚ್ಚಿದ್ದಾರೆ ಅಂತ ಇವಳಿಗೆ ತಿಳಿದಿಲ್ಲವೋ ಅಥವಾ ತಿಳಿದಿದ್ದರೂ, ಅದನ್ನು ಒಪ್ಪಲು ಸಿದ್ಧಳಿಲ್ಲವೋ ಎಂದುಕೊಂಡಳು.

"'ಹಾಗಾದರೆ ಆದಷ್ಟು ಬೇಗ ಇವನಿಗೆ ಮದುವೆ ಮಾಡಿಬಿಡು. ಎಲ್ಲಾ ಸರಿಹೋಗುತ್ತೆ"

"ತಕ್ಷಣಕ್ಕೆ ಹುಡುಗಿ ಸಿಗಬೇಕಲ್ಲ....." ನಿನ್ನ ಅತ್ತೆ ಮನೆ ಕಡೆ ಯಾರನ್ನಾದ್ರೂ ವಿಚಾರಿಸ್ತೀಯಾ?

"ಇಲ್ಲಮ್ಮ. ನನಗದೆಲ್ಲ ಇಷ್ಟವಿಲ್ಲ. ಅವಸರ ಪಡಬೇಡ: ಮೊದಲು ಅವನನ್ನು ಒಂದು ಮಾತು ಕೇಳಬೇಕಡವೆ?"

"ಹೇಗೂ ನೀನು ಬಂದಿದೀಯಲ್ಲ ಕೇಳು"

"ಹುಂ. ಪ್ರಯತ್ನಿಸ್ತೀನಿ" ಹಾಗೆ ಹೇಳಿದಾರೂ, ಎರಡು ಮೂರು ದಿನ ಕಳೆದರೂ ಅವನೊಡನೆ ಆ ವಿಷಯ ಕುರಿತು ಪ್ರಸ್ತಾಪಿಸಲಿಲ್ಲ. ಮಧುರಳೂ ಬಂದಿರಲಿಲ್ಲವಾದ್ದರಿಂದ ತಾನೇ ಅವರ ಮನೆಗೆ ಹೋದಳು.

"ನಾನಿವತ್ತು ಇಲ್ಲೇ ಊಟ ಮಾಡ್ತೀನಿ. ಏನಾದರೂ ಸ್ಪೆಷಲ್ ಮಾಡಕ್ಕೆ ಹೇಳು ನಿಮ್ಮ ತಾಯಿಗೆ" ನಿಸ್ಸಂಕೋಚವಾಗಿ ಹೇಳಿದ್ದಳು.

"ನಿನಗೇನು ಬೇಕು? ಅದನ್ನೇ ಮಾಡಿಸ್ತೀನಿ"

"ಏನಾದರೂ ಸರಿ. ಒಂದೇ ತರಹದ ಅಡಿಗೆ ಊಟ ಮಾಡಿ ಬಾಯಿ ಕೆಟ್ಟು ಹೋಗಿದೆ. ಒಂದೊಂದು ಸಲವಂತೂ ಸೇರುವುದೇ ಇಲ್ಲ"

ಶೇಷಾದ್ರಿ ವಿಶ್ವಾಸವಾಗಿ ಮಾತನಾಡಿಸಿದ್ದರು. "ಏನಮ್ಮ ಹೇಗಿದೀಯಾ! ಯಜಮಾನರು ಹೇಗಿದ್ದಾರೆ?" ಅಂತ. ಎಷ್ಟೋ ಹೊತ್ತಿನ ನಂತರ ಮಧುರಳ ತಾಯಿಯೂ ಬಂದು ಮಾತನಾಡಿಸಿದ್ದಳು. "ಅಮ್ಮಾ, ಅಪರೂಪಕ್ಕೆ ಬಂದಿದ್ದಾಳೆ. ಏನಾದರೂ ಸ್ಪೆಷಲ್ ಅಡಿಗೆ ಮಾಡ್ತೀಯ ಅವಳಿಲ್ಲೇ ಊಟ ಮಾಡ್ತಾಳೆ" ಮಧುರ ಕೇಳಿದಳು.

"ಹುಂ. ನಿನಗೇನು ಬೇಕೋ ಹೇಳಮ್ಮ ಅದನ್ನೇ ಮಾಡ್ತೀನಿ" ಎಂದರಾಕೆ.

"ಯಾವುದಾದರೂ ಸರಿ, ಕೂಟು, ಗೊಜ್ಜು, ಪುಳಿಯೊಗರೆ, ಬಿಸಿಬೇಳೆ ಭಾತ್. ವಾಂಗೀಭಾತ್... " ಲಿಸ್ಟ್ ಹೇಳುತ್ತಾ ಹೋದಂತೆ ಮಧುರ ನಕ್ಕಳು.

"ದಿನಾ ಒಂದೊಂದನ್ನು ತಿನ್ನುವಂತೆ, ಜತೆಗೆ ಹಪ್ಪಳ ಸಂಡಿಗೆ ಬಾಳಕ ಇತ್ಯಾದಿ ಇತ್ಯಾದಿ....."

"ಮಜ್ಜಿಗೆ ಹುಳಿ..... ಮಜ್ಜಿಗೆ ಹುಳಿ....." ಮರೆಯದೇ ಸೇರಿಸಿದಳು. ಆಕೆ ಸಹ ನಕ್ಕಳು.

ಗೆಳತಿಯರಿಬ್ಬರೂ ಕುಳಿತು ಹರಟೆ ಹೊಡೆದರು. ಒಳಗೆ ಮಧುರಳ ತಾಯಿ ಗುಡು ಗುಡು ಸದ್ದು ಮಾಡುತ್ತಾ ಏನನ್ನೋ ತಿರುವುತ್ತಿದ್ದಳು.

"ಈ ಸಲವಾದರೂ, ನಿಮ್ಮ ತಾಯಿ ಮಾಡುವ ಅಡಿಗೆಯ ರೀತಿ ತಿಳಿದುಕೊಳ್ಳಬೇಕು. ಅವರಮ್ಮನ ಅಡಿಗೆಯೇ ಚೆನ್ನ ಅಂತ ಮನೋಹರ ಜಂಭ ಕೊಚ್ಚಿಕೊಳ್ಳುವುದನ್ನು ತಪ್ಪಿಸಬೇಕು."

"ಯಾರನ್ನೂ ನಾವು ಬಲವಂತವಾಗಿ ಒಪ್ಪಿಸಲು ಸಾಧ್ಯವಿಲ್ಲ ಮಾಲತಿ. ಎಲ್ಲರಿಗೂ ತಾವು ಹೇಳಿದ್ದೆ ಸರಿ ಎನ್ನುವ ಮೊಂಡುವಾದ ಇರುತ್ತೆ. ನಮ್ಮ

ಪಾಡಿಗೆ ನಾವಿರುವುದೇ ವಾಸಿ"

"ಈ ಮಾತನ್ನೇಕೆ ಹೇಳ್ತಿದೀಯಾ.... ನನ್ನ ಮಾತಿಗೆ ಸರಿಹೊಂದಲ್ಲ"

"ಸುಮ್ಮನೇ ಹೇಳಿದೆ. ಗಂಭೀರವಾದ ವಿಷಯಗಳಿಗೇ ಮಾನ್ಯತೆ ಕೊಡುದವರು ಯಃಕಶ್ಚಿತ್ ಊಟ ತಿಂಡಿ ವಿಷಯಕ್ಕೂ ತಮ್ಮ ಹಠ ಸಾಧಿಸ್ತಾರೆ ಅಲ್ವಾ!"

"ನೀನು ಯಾರನ್ನೋ ಉದ್ದೇಶಿಸಿ ಈ ಮಾತನ್ನು ಆಡ್ತಿದೀಯಾ ಅಂತ ಅನ್ನಿಸ್ತಿದೆ."

"ಏನಿಲ್ಲ. ಜನರಲ್ ಆಗಿ ಹೇಳಿದೆ." ಅಂತ ಅವಳು ಅಂದರೂ ಮಾಲತಿ ಬಿಡಲಿಲ್ಲ. ನಿನ್ನ ಮನಸ್ನಲ್ಲಿ ಏನೋ ಗಹನವಾದ ವಿಷಯ ಇದೆ. ಹೇಳು. ನಾನು ನಿನಗೆ ಸಹಾಯ ಮಾಡ್ತೀನಿ. ಪ್ಲೀಸ್ ಹೇಳು.

"ಏನಿಲ್ಲ ಅಂದ್ನಲ್ಲೇ.... "ಅಂದಳು ಮತ್ತೆ.

"ಸರಿ. ಹೀಗೇ ಜೀವಮಾನವೆಲ್ಲ ಮನಸ್ನಲ್ಲಿಟ್ಟುಕೊಂಡು ಕೊರಗು. ನನಗೇನಂತೆ? ಅಂದ್ಹಾಗೆ ಇನ್ನೊಂದು ಮುಖ್ಯವಾದ ವಿಷಯ. ಅಮ್ಮ ಮೋಹನನಿಗೆ ಹೆಣ್ಣು ಹುಡುಕ್ತಿದ್ದಾಳೆ. ನಾನಿಲ್ಲದ ಮನೆ ಬಿಕೋ ಅನ್ನುತ್ತಿದೆಯಂತೆ. ಇನ್ನೊಂದು ಹೆಣ್ಣು ಗಲಗಲ ಅಂತ ಓಡಾಡಲಿ ಅಂತ ಅಮ್ಮನ ಆಸೆ" ಹೇಳುತ್ತಾ ಅವಳನ್ನೇ ಪರೀಕ್ಷಿಸುವವಳಂತೆ ನೋಡಿದಳು. ಆದರೆ ಮಧುರ ಯಾವ ಭಾವನೆಯನ್ನೂ ಹೊರಗೆಡವಲಿಲ್ಲ.

'ಮಧುರ ನೀನು ಬಲು ಜಾಣೆ' ಎಂದು ಮನಸ್ಸಿನಲ್ಲೇ ಅಂದುಕೊಂಡು ಹೀಗೇ ಸುಮ್ಮನೇ ಕಾಲಹರಣ ಮಾಡುವುದು ಸರಿಯಲ್ಲ. ಒಂದು ಇತ್ಯರ್ಥ ವಾಗಲೇಬೇಕು. ಅಮ್ಮನಿಗೆ ಮೋಹನನ ಮೇಲೆ ಅನುಮಾನವಿದ್ದರೂ ಬಾಯಿಬಿಡಲಿಲ್ಲ. ಇವರ ಮನೆಯಲ್ಲಿ ಯಾರಿಗೂ ಅದರ ಸುಳಿವೇ ಇಲ್ಲವೇನೋ ಎಂಬಂತೆ ತಟಸ್ಥವಾಗಿದ್ದಾರೆ. ಎಂತಹ ಜನರಪ್ಪಾ.... ಬರೀ ರುಚಿ ರುಚಿಯಾಗಿ ಅಡಿಗೆ ಮಾಡಿಕೊಂಡು ತಿಂದು ಕಾಲ ಕಳೆದರೆ ಆಯ್ತು! ಭಾವನೆಗಳಿಗೆ ಬೆಲೆ ಬೇಡವೆ! ಎಂದುಕೊಂಡು, ಇದ್ದಕ್ಕಿದ್ದಂತೆ ಕೇಳಿದಳು.

"ಮಧುರ, ನಿನಗೆ ಮದುವೆಯಾಗಬೇಕು ಅಂತ ಅನ್ನಿಸಲ್ಲವೇನೆ!"

ತಟಕ್ಕನೇ ಅದಕ್ಕೆ ಅವಳು ಉತ್ತರ ಹೇಳಲು ಸಾಧ್ಯವೇ! ಮಿಕಿ ಮಿಕಿ ಅವಳನ್ನೇ ನೋಡಿದಳು.

"ನಿನ್ನನ್ನೇ ಕೇಳಿದ್ದು, ನಿನಗೂ ನನ್ನಷ್ಟೇ ವಯಸ್ಸು. ನನ್ನ ಮದುವೆಯಾಗಿದೆ.... ನಿನಗೆ ಏನೂ ಅನ್ನಿಸುವುದಿಲ್ಲವೆ ಅಂತ ಕೇಳಿದೆ" ಒತ್ತಿನುಡಿದಳು.

"ಅದರ ಬಗ್ಗೆ ನಾನು ಚಿಂತಿಸಿಯೇ ಇಲ್ಲ. ನನಗೆ ಗೊತ್ತಿಲ್ಲ. "

"ಚಿಂತೆ ಮಾಡಬೇಕಾಗಿಲ್ಲ. ಆಸೆ ಇದೆಯೋ ಇಲ್ಲವೋ ಅಷ್ಟು ಹೇಳು."

"ನನಗೆ ಆಸೆ ಇದ್ದರೂ, ಅದನ್ನು ನಾನು ಯಾರ ಹತ್ತಿರ ಹೇಳಿಕೊಳ್ಳಲಿ"

"ನನ್ನ ಹತ್ತಿರ ಹೇಳು...."

"ನಿನಗೆ ಹೇಳಿದೆ ಅಂತಿಟ್ಕೋ. ಆ ಆಸೆ, ಆಸೆಯಾಗಿಯೇ ಉಳಿಯುತ್ತೆ."

"ಪೆದ್ದೇ.... ನಾನು ನಿನ್ನ ತಾಯಿಗೆ ಹೇಳ್ತೀನಿ....ಆದರೆ ಏಕೋ ಏನೋ ಅವರ ಎದುರಿಗೆ ಬಾಯಿ ಬಿಟ್ಟು ಮಾತನಾಡಲು ಕಷ್ಟವೆನಿಸುತ್ತೆ."

"ಹೋಗಲಿ ಬಿಡೇ. ಮದುವೆ ಆದರೂ ಸರಿ. ಆಗದಿದ್ದರೂ ಸರಿ"

"ಈ ವೈರಾಗ್ಯವೆಲ್ಲ ಬೇಡ. ನಾನು ನಿನ್ನ ತಾಯಿಯ ಹತ್ತಿರ ಸುಮ್ಮನೇ ಇದರ ವಿಷಯ ಎತ್ತುತ್ತೀನಿ"

"ಬೇಡ ಬೇಡ. ನಾನೇ ಹೇಳಿಕೊಟ್ಟೆ ಅಂತ ಅಂದುಕೊಳ್ತಾಳೆ ಅಮ್ಮ"

"ಮಗಳ ಮನಸ್ನಲ್ಲಿ ಏನಿದೆ ಅಂತ ನಿಮ್ಮಮ್ಮನಿಗೆ ಇದುವರೆಗೂ ತಿಳಿದಿಲ್ಲ ಅಂತ ಅನ್ನಿಸಿದರೆ ಆಶ್ಚರ್ಯವಾಗುತ್ತಮ್ಮ"

"ಅವಳ ಮನಸ್ನಲ್ಲಿ ಏನಿದೆ ಅಂತ ನಮಗೂ ತಿಳಿಯದು"

"ಅವಳು ಅಗತ್ಯಕ್ಕಿಂತ ಹೆಚ್ಚಿಗೆ ಮೌನವಾಗಿರುವುದನ್ನು ಕಂಡರೆ ಭಯವಾಗುತ್ತೆ"

"ಹಾಗಾದ್ರೆ ಅವರಿಗೆ ಡಾಕ್ಟರರನ ಸಲಹೆಯ ಅಗತ್ಯವಿದೆ ಅಂತ ಅನ್ನಿಸುತ್ತೆ"

ಅಷ್ಟರಲ್ಲಿ ಆಕೆ 'ಮಧುರಾ' ಅಂತ ರಾಗವಾಗಿ ಕೂಗಿದಾಗ, ಮಾಲತಿ ನಕ್ಕಳು. "ನಡೀ ಊಟಕ್ಕೆ ಬುಲಾವ್" ಇಬ್ಬರೂ ಎದ್ದು ಅಡಿಗೆ ಮನೆ ಕಡೆ ಹೊರಟರು.

ಆಕೆ ತಾನೇ ತಟ್ಟೆ ಹಾಕಿ, ನೀರನ್ನಿಟ್ಟು ಮಣೆ ಹಾಕಿದ್ದರು. ಬಡಿಸಲು ಅನುಕೂಲವಾಗುವಂತೆ ಎಲ್ಲಾ ಇಟ್ಟಿದ್ದರು. ವ್ಹಾ..... ಮಜ್ಜಿಗೆ ಹುಳಿ.... ಎಂದಳು ಬಾಯಿ ಚಪ್ಪರಿಸಿ.....

ಮಜ್ಜಿಗೆ ಹುಳಿ, ಜತೆಗೆ ನೆಂಚಿಕೊಳ್ಳಲು ಸಂಡಿಗೆ, ಮಾಲತಿ ಮಜವಾಗಿ ಊಟ ಮಾಡಿದಳು. ಉಳಿದದ್ದೆಲ್ಲಾ ಮರೆತೇ ಹೋಯಿತು. ಗಡದ್ದಾಗಿ ಊಟ ಮಾಡಿದವಳಿಗೆ ತೂಡಡಿಕೆ ಬಂತು. ಸ್ನೇಹಿತೆಯ ಹಾಸಿಗೆ ಮೇಲೆ ಮಲಗಿದಳು ನಿದ್ದೆ ಬಂತು.

ಎಷ್ಟೋ ಹೊತ್ತಿನ ನಂತರ ಮಧುರ ಎಬ್ಬಿಸಿದಳು.

"ಏಳೇ ನಿಮ್ಮಣ್ಣ ಬಂದಿದ್ದಾರೆ ಎಂದಾಗ ಕಣ್ಣನ್ನು ಹೊಸಕುತ್ತಾ ಎದ್ದಳು."

"ಏನೇ, ಎಲ್ಲಿ ಬಂದರೆ ಅಲ್ಲೇ ಝಾಂಡಾ ಹೂಡಿ ಬಿಡ್ತೀಯಲ್ಲಾ, ಬಹಳ ಸೋಮಾರಿಯಾಗಿ ಬಿಟ್ಟಿದೀಯ ನೀನು" ಗೇಲಿ ಮಾಡಿ ನಕ್ಕ ಮೋಹನ.

"ಊಟ ತುಂಬಾ ಹೆವಿಯಾಯ್ತು. ನಿದ್ದೆ ಬಂದುಬಿಡ್ತು. ಮಜ್ಜಿಗೆ ಹುಳಿ ಎಷ್ಟು ಚೆನ್ನಾಗಿತ್ತು ಅಂತೀಯ"

"ಬೇರೆಯವರಿಗೂ ಉಳಿಸಿದ್ದಿಯೋ ಅಥವಾ ಎಲ್ಲಾ ಮುಗಿಸಿದ್ದಿಯೋ"

"ಇದ್ದರೆ, ರಾತ್ರಿಗೂ ಸ್ವಲ್ಪ ತಗೊಂಡು ಬರುವ ಪ್ಲಾನ್ ಇದೆ"

ಅವರ ಮಾತುಗಳನ್ನು ಕೇಳಿಸಿಕೊಂಡಿದ್ದ. ಮಧುರಳ ತಾಯಿ, ಒಂದು ಡಬ್ಬಿ ತುಂಬಾ ಮಜ್ಜಿಗೆ ಹುಳಿ ತಂದು ಕೊಟ್ಟರು. ಮಾಲತಿ ಬೇಡವೆನ್ನದೆ ತೆಗೆದುಕೊಂಡಾಗ, ಅವನು ಮಧುರಳ ಕಡೆ ನೋಡಿ "ನೋಡಿದ್ಯಾ, ಉಂಡೂ ಹೋದ ಕೊಂಡೂ ಹೋದ ಅಂತಾರಲ್ಲ. ಆ ಜಾತಿಯವಳು ಇವಳು...." ಎಂದ.

"ನಿನಗೇನು ಕಷ್ಟ?" ಅಣಗಿಸಿದಳು. ಮಧುರ ಅವರಿಬ್ಬರ ಕಲಹವನ್ನು ಆಲಿಸುತ್ತಾ ನಿಂತಿದ್ದಳು.

"ಬರ್ತಾಇರಮ್ಮ ಆಗಾಗ" ಆಕೆ ಹೇಳಿದಾಗ, "ನಾಳೆಯ ಮೆನು ಏನು?" ಮೋಹನ ತಮಾಷೆಯಾಗಿ ಕೇಳಿದ್ದ ಎಲ್ಲರೂ ಒಟ್ಟಿಗೇ ನಕ್ಕರು......

ಕೆದರಿದ ತಲೆಯೊಡನೆ ಬಂದ ಮಗಳನ್ನು ಕಂಡು ಭವಾನಮ್ಮ ರೇಗಿದಳು.

ಯಾರಾದ್ರೂ ನೋಡಿದರೆ ಏನಂದುಕೊಂಡಾರು! ಹೊಸದಾಗಿ ಮದುವೆಯಾದ ಹುಡುಗಿ, ಮೊದಲು ಹೋಗಿ ಮುಖ ತೊಳೆದು ತಲೆ ಬಾಚ್ಕೋ.

"ಯಾಕೆ ಏನಾಗಿದೆ! ನಾನೆಲ್ಲಿಗೆ ಹೋಗಬೇಕು? ನಾನು ಸರಿಯಾಗಿದೀನಿ"

"ಅವಳ ಜೊತೆ ಮಾತಿಗೆ ಕುಳಿತರೆ, ಪ್ರಪಂಚವೇ ಮರೆತು ಹೋಗುತ್ತೆ ನಿನಗೆ. ಗಂಟೆ ಎಷ್ಟಾಗಿದೆ ಗೊತ್ತೆ?"

"ಅವಳ ಮನೆಗೆ ಹೋಗಿ ಅವಳನ್ನು ಮಾತಿಗೆ ಎಳೆದವಳು ನಾನು. ಆದರೂ ಅವರಮ್ಮ ನಿನ್ನಂತೆ ಸಿಡುಕಲಿಲ್ಲ. ನಿನಗೆ ಅಂತ ಮಜ್ಜಿಗೆಹುಳಿ ಕೊಟ್ಟಿದ್ದಾರೆ ತಗೋ...."

"ಅವರ ಮನೆ ಮಜ್ಜಿಗೆ ಹುಳಿಯ ರುಚಿಯೇ ಬೇರೆ" ತಂದೆ ನುಡಿದಾಗ, ಆಕೆಗೆ ರೇಗಿತ್ತು.

"ಅವರಿವರ ಮನೆ ಅಡಿಗೇನ ಹೊಗಳಿಕೊಂಡು ಊಟ ಮಾಡಿ, ನಿಮಗೆಲ್ಲ ಹಾಗೇನೇ..."

"ಚೆನ್ನಾಗಿದ್ದುದನ್ನು ಚೆನ್ನಾಗಿದೆ ಅಂದರೆ ತಪ್ಪೇನು!"

"ಹೌದು ಹೌದು. ಅವರ ಮನೆಯದೆಲ್ಲಾ ಚೆನ್ನವೇ ನಿಮಗೆ"

"ಆಕೆ ಮಾಡುವ ಅಡಿಗೆ ಚೆನ್ನಾಗಿರುತ್ತೆ ಅಂದನೇ ಹೊರತು. ಆಕೆ

ಚೆನ್ನಾಗಿದ್ದಾಳೆ ಅನ್ನಲಿಲ್ಲವಲ್ಲ. ನಿನಗೇಕಿಷ್ಟು ಕೋಪ?" ಆತ ಕೆಣಕಿದರು.

ಉಳಿದವರೂ ಗೊಳ್ ಅಂತ ನಕ್ಕಾಗ, ಅವಳಿಗೂ ನಗು ಬಂತು.

"ಈ ಮಾತನ್ನು ನನ್ನ ಎದುರಿಗೆ ಹೇಳಿದರೆ ಏನು ಪ್ರಯೋಜನ! ಮಧುರಳ ತಂದೆ ಎದುರಿಗೆ ಹೇಳಿ. ಆಗುತ್ತೆ ಮುಖ ಪ್ರಕ್ಷಾಳನ....."

"ಆಕೆ ಹೇಗಿದ್ದಾರೋ ನಾನು ಸರಿಯಾಗಿ ನೋಡೇ ಇಲ್ಲ"

"ಹೋಗಿ, ಈಗಲೇ ಹೋಗಿ ನೋಡಿಕೊಂಡು ಬನ್ನಿ. ಹೋಗೋ ಮೋನ. ಕರೆದುಕೊಂಡು ಹೋಗೋ ಇವರನ್ನು....."

"ನೀನು ಹೀಗೆ ಆಡ್ತಿರು. ನಾನು ದೇಶಾಂತರ ಹೋಗಿಬಿಡ್ತೀನಿ"

"ಸರಿ. ಹೋಗಕ್ಕೆ ಮುಂಚೆ ಈ ಮಜ್ಜಿಗೆ ಹುಳಿ ರುಚಿಯನ್ನು ನೋಡಿಯೇ ಹೋಗೋರಂತೆ. ಸ್ವಲ್ಪ ಹೊತ್ತು ಇದ್ದು ಹೊರಡಿ" ತಾಯಿ ಒಳಗೆ ಹೋದಾಗ ಮೂವರೂ ಮುಖ ಮುಖ ನೋಡಿಕೊಂಡು ನಕ್ಕರು.

"ಯಾಕಪ್ಪಾ ಅಮ್ಮನ್ನ ರೇಗಿಸ್ತೀಯ!"

"ಇದೆಲ್ಲ ಮಾಮೂಲು.... ಇಪ್ಪತ್ತೆಂಟು ವರ್ಷದಿಂದ ಹೀಗೇ ಕಾಲ ಕಳೆದಿದ್ದೀವಿ ನಾವಿಬ್ಬರು."

"ಸಿಲ್ವರ್ ಜೂಬಲಿ ಆಗಿ ಹೋಗಿದೆ..... ಪರವಾಗಿಲ್ವೇ....."

"ಹೀಗಿದ್ರೇ ಚೆನ್ನ ಬಿಡಿ.... ಮಧುರನ ಮನೆಯಲ್ಲಿ ಯಾರೂ ಹೆಚ್ಚಿಗೆ ಮಾತಾಡಿದ್ದೇ ಗೊತ್ತಿಲ್ಲ. ನಾನು ಹೋದರೇ ಒಂದಿಷ್ಟು ಮಾತು...." ಎಂದಳು ಮಾಲತಿ.

"ಅವರಪ್ಪ ಅಮ್ಮ ಹೀಗೆ ಒಬ್ಬರನ್ನೊಬ್ಬರು ರೇಗಿಸಲ್ಲವೆ?"

"ಸಧ್ಯ...... ಅವರಮ್ಮನಿಗೆ ಮಾತೇ ಬರುತ್ತೋ ಇಲ್ಲವೋ ಅಂತ ಪರೀಕ್ಷೆ ಮಾಡಿ ತಿಳಿದುಕೊಳ್ಳುವಷ್ಟು ಮೌನ. ಪಕ್ಕದ ಮನೇಲೇ ಇದ್ರಲ್ಲ. ಅಮ್ಮನಿಂದ ಮಾತು ಕಲಿತಿಲ್ಲ ಅಂದರೆ ಆಶ್ಚರ್ಯವಾಗುತ್ತೆ."

"ಆಕೆ ಹೆಚ್ಚಾಗಿ ಹೊರಕ್ಕೇ ಬರುತ್ತಿರಲಿಲ್ಲ. ನಿಮ್ಮಮ್ಮಂಗೂ ಆಕೆಗೂ ಹೆಚ್ಚಿಗೆ ಸ್ನೇಹ ಬೆಳೆಯಲೇ ಇಲ್ಲ. ಆತ ಕಂಡಾಗ ಎಷ್ಟೋ ಅಷ್ಟು ಮಾತು..... ಆಮೇಲೆ ನಾವು ಇಲ್ಲಿಗೆ ಬಂದು ಬಿಟ್ಟೆವು."

"ಆಕೇನ ನೋಡಿದರೆ ಏನೋ ಕೊರಗು ಇದೆ ಅಂತನ್ನಿಸುತ್ತೆ. ಏನೋ ರಹಸ್ಯವಿದೆ. ಮಧುರಂಗೂ ಗೊತ್ತಿಲ್ಲವೇನೋ...."

"ಅವಳೂ ಅವರ ಅಮ್ಮನಂತೆ ಗುಟ್ಟು ಮಾಡುತ್ತಿರಬಹುದು. ಮನಸ್ಸಿನಲ್ಲಿರುವುದನ್ನು ಬಾಯಿಬಿಟ್ಟು ಎಂದು ಹೇಳಿದ್ದಾಳೆ ನಿನ್ನ ಹಾಗೆ?"

ಮೋಹನ ನುಡಿದ.

"ಕರೆಕ್ಟ್. ನಿನಗೆ ಹೇಗೆ ಗೊತ್ತಾಯ್ತು?" ಪ್ರಶ್ನಿಸಿದಳು.

"ಎಷ್ಟೋಸಲ ಅವಳ ಜತೆ ತಿರುಗಾಡಿದೀನಲ್ಲ. ಮುಕ್ತವಾಗಿ ಮಾತನಾಡುವುದಿಲ್ಲವೇನೋ ಅಂತನ್ನಿಸುತ್ತೆ" ತನ್ನ ಮನಸ್ಸಿನಲ್ಲಿರುವುದನ್ನು ಹೇಳಿದ.

"ಹಾಗಾದ್ರೆ ಅವಳನ್ನು ಚೆನ್ನಾಗಿ ಅಭ್ಯಾಸ ಮಾಡಿದೀಯ ಅಂತಾಯ್ತು"

"ಏನಪ್ಪಾ..... ಏನು ಸಮಾಚಾರ" ತಂದೆ ಕೇಳಿದಾಗ ನಕ್ಕ.

"ಅಪ್ಪಾ, ಮಧುರನ್ನ ನೋಡಿದರೆ ಏನನಿಸುತ್ತೆ! ಅಂದರೆ ಅವಳ ಬಗ್ಗೆ ನಿಮ್ಮ ಅಭಿಪ್ರಾಯವೇನು!" ಮಾಲತಿ ಕೇಳಿದಳು.

"ಒಳ್ಳೆಯ ಹುಡುಗಿ ಅಂತ ಅನ್ನಿಸುತ್ತೆ" ನಿಜ ನುಡಿದಿದ್ದರು.

"ಅಷ್ಟೇನಾ?"

"ಹುಂ. ಇನ್ನೇನು? ಇನ್ನೇನಾದರೂ ಯೋಚಿಸುಕ್ಕೆ ನಿಮ್ಮಮ್ಮ ಎಂದಾದರೂ ಬಿಟ್ಟಿದ್ದಾಳೆಯೆ! ಎಂದೂ ಆ ಹುಡುಗೀನ ಹೊಗಳಿದ್ದು ಕಾಣೆ. ಇಲ್ಲದ್ದನ್ನು ಹುಡುಕಿ ಏನಾದರೂ ಮಾತನಾಡಿ ಆ ಹುಡುಗಿಯ ಮನಸ್ಸನ್ನು ನೋಯಿಸಿದ್ದಾಳೆ. ಕಾಲು ಉಳುಕಿಸಿಕೊಂಡು ಮಲಗಿದ್ದಾಗ, ಪಾಪ ಆ ಹುಡುಗಿ ಬಿಸಿ ಬಿಸಿ ಅಡಿಗೆ ತಂದು ಬಡಿಸಿದರೆ ನಗು ನಗುತ್ತಾ ಊಟ ಮಾಡುವುದನ್ನು ಬಿಟ್ಟು ಸಿಡಿ ಸಿಡಿ ಅಂತ ಕೆಟ್ಟ ಮುಖ ಹಾಕಿಕೊಂಡು, ನಮ್ಮನ್ನೆಲ್ಲ ಹೀಯಾಳಿಸಿ ಅಂದು, ಆ ಹುಡುಗಿ ಹೋಗುವಂತೆ ಮಾಡದಳಮ್ಮ. ಆ ದಿನ ನನಗೆ ತಂಬಾ ಬೇಸರವಾಯಿತು. ನಿಮ್ಮಮ್ಮನಿಗೆ ಏಕೋ ಆ ಹುಡುಗಿಯನ್ನು ಕಂಡರೆ ಆಗೊಲ್ಲ. ಆದ್ದರಿಂದ ನನ್ನ ಆಸೆಯನ್ನು ವ್ಯಕ್ತಪಡಿಸಲಾಗದೇ ಮನಸ್ಸಿನಲ್ಲೇ ಇಟ್ಟುಕೊಂಡಿದ್ದೀನಿ."

"ಏನಪ್ಪಾ..... ಆಸೆ?"

"ಮೋನ ಒಪ್ಪಿದರೆ, ಅವಳನ್ನು ಈ ಮನೆಗೆ ಸೊಸೆಯಾಗಿ ತರುವ ಆಸೆ"

"ನಿಜವಾಗಿಯೂ? ಮೋನ ಈಗೇನು ಹೇಳ್ತಿ?" ಹುಬ್ಬೇರಿಸಿದಳು ಮಾಲತಿ.

"ಯಾಕೆ? ಅವನಿಗೆ ಇಷ್ಟವಿಲ್ಲವೆ?"

"ಬಹುಶಃ ಅವನೂ ಅಮ್ಮನ್ನ ಎದುರು ಹಾಕಿಕೊಳ್ಳಲು ಇಷ್ಟವಿಲ್ಲದೇ ಸುಮ್ಮನಿದ್ದಾನೇನೋ?"

"ನಿನ್ನ ಮನಸ್ಸಿನಲ್ಲಿ ಏನಿದೆ ಅಂತ ಹೇಳು. ನಾನು ನಿನಗೆ ಸಹಾಯ

ಮಾಡ್ತೀನಿ. ನಿನ್ನ ಒಪ್ಪಿಗೆ ಇಲ್ಲದೇ ನಾನು ಏನೂ ಹೇಳುವಂತಿರಲಿಲ್ಲವಾದ್ದರಿಂದ ಸುಮ್ಮನಿದ್ದೆ. ನಾವು ಮೂವರೂ ಸೇರಿ, ಅವಳನ್ನು ಒಪ್ಪಿಸೋಣ."

"ಟಗ್ ಆಫ್ ವಾರ್" ನಾವು ಮೂರು ಜನ ಒಂದು ಕಡೆ. ಅಮ್ಮನೇ ಒಂದು ಕಡೆ ಮಾಲತಿ ನಕ್ಕಾಗ, ಮೋಹನ ನಗಲಿಲ್ಲ.

"ಅಮ್ಮ ಒಪ್ಪುವಂತೆ ಅನ್ನಿಸುವುದಿಲ್ಲ"

"ನೋಡೋಣ. ಈಗಲೇ ಧೃತಿಗೆಡಬೇಡ" ತಂದೆ ನುಡಿದರು.

"ಹುಂ. ಅಗರ್ ತೇರಾ ಪಾರ್ ಸಚ್ಚಾ ಹೈತೋ ಕೋಯಿನಾ ಕೋಯಿ ರಾಸ್ತಾ ಜರೂರ್ ನಿಕಲೇಗಾ....." ಮಾಲತಿ ರಾಗವಾಗಿ ಹಾಡಿದಂತೆ ನುಡಿದಳು.

"ಮಾಲತೀ...."

"ದೇಖೋ, ತೇರಾ ರಾಸ್ತಾ...." ಈಗ ಮೋಹನ ನಕ್ಕ.

"ಇಷ್ಟು ದಿನಗಳೂ ಸುಮ್ಮನೇ ಲಡ್ಡಾಗಿ, ಯಾವ ತೂಕದ ಮಾತುಗಳಿಲ್ಲದೆ ಕಳೆದುಹೋದವು. ನಿನ್ನ ಅಮ್ಮನನ್ನು ಒಪ್ಪಿಸಲು ಪ್ರಯತ್ನಿಸ್ತೀನಿ. ಏನೇ ಆದರೂ ನಿನಗೆ ಆ ಹುಡುಗಿ ಒಪ್ಪಿಗೆ ಆಗಿದ್ದರೆ ಅವಳನ್ನು ಮದುವೆಯಾಗು. ನಾನು ನಿನಗೆ ಸಹಾಯ ಮಾಡ್ತೀನಿ. ಒಬ್ಬರಾದ್ರೂ ಸರಿಯಾಗಿ ಮಾತಾಡೊಲ್ಲ" ತಂದೆ ನುಡಿದರು.

"ಅಮ್ಮನ ವಿರೋಧ ಕಟ್ಟಿಕೊಳ್ಳುವ ಇಷ್ಟವಿಲ್ಲ. ಅವಳೂ ಒಪ್ಪುವಂತಹ ದಾರಿ ಯಾವುದಾದ್ರೂ ಇದ್ದರೆ ಹೇಳಿ. ನಿಧಾನವಾಗಿ ಯೋಚಿಸಿ, ನನಗೆ ಅವಸರವೇನಿಲ್ಲ ಮದುವೆಗೆ"

"ಲೇ ಮಾಲತಿ ಅಮ್ಮನ ಹತ್ತಿರ ಏನು ಮಾತನಾಡಬೇಡ, ಇದನ್ನೆಲ್ಲ!"

"ಅಷ್ಟು ಗೊತ್ತಾಗುಲ್ವೆ ನನಗೆ!"

"ಮೋನ, ಒಂದು ಕೆಲಸ ಮಾಡು; ನೀನು ಅವಳ ತಂದೆಯ ಹತ್ತಿರ ಹೋಗಿ, ನಾನು ನಿಮ್ಮ ಮಗಳನ್ನು ಮದುವೆಯಾಗ ಬೇಕು ಅಂತಿದೀನಿ.... ನಿಮ್ಮ ಅಭಿಪ್ರಾಯವೇನು? ಅಂತ ಕೇಳಿ ತಿಳಿದುಕೋ....."

"ಇದೇನಪ್ಪಾ ನೀವೇ ಹೀಗೆ ಹೇಳಿ ಕಳಿಸ್ತಿದೀರಲ್ಲಾ?"

"ಅವನೇ ಹೋಗಿ ಕೇಳಲಿ. ಅವಳನ್ನು ಮೆಚ್ಚಿರುವವನು ಅವನೇ ತಾನೇ, ನಾವುಗಳು ನಂತರ ಒಪ್ಪಿಗೆ ಕೊಡಬೇಕು. ಆತನಾಗಲೀ, ಆಕೆಯಾಗಲೀ ಒಪ್ಪದಿದ್ದರೆ, ಸುಮ್ಮನೇ ಹಗರಣವಾಗುತ್ತೆ....."

ಆದರೆ ಯಾಕೋ ಈ ಯೋಜನೆ ಸರಿಯಿಲ್ಲ. ಎಂದೆನಿಸಿತ್ತು ಮೋಹನನಿಗೆ. ತಾನು ಹೋಗಿ ಕೇಳುವುದಾದರೂ ಹೇಗೆ? ಹೆಚ್ಚಿಗೆ ಎಂದೂ ಮಾತನಾಡಿಲ್ಲ.

ಒಂದು ಸಾಯಂಕಾಲ, ಮಧುರ ಏದುಸಿರು ಬಿಡುತ್ತಾ ಮಾಲತಿಯ ಮನೆಗೆ ಬಂದಳು.

"ರಾಗಿಣಿ ಇಲ್ಲೇನಾದರೂ ಬಂದಿದ್ದಾಳಾ? ಸ್ಕೂಲಿನಿಂದ ಬಂದೇ ಇಲ್ಲ ಇನ್ನೂ" ಎಂದಳು.

"ಇಲ್ಲವಲ್ಲ" ಎಂದ ಮಾಲತಿಗೂ ಗಾಬರಿಯಾಗಿತ್ತು. "ರಾಗಿಣಿ ಎಂದೂ ಇಷ್ಟು ತಡಮಾಡಿಲ್ಲ. ನಮಗೆಲ್ಲ ಗಾಭರಿಯಾಗಿದೆ."

"ಅವಳ ಸ್ನೇಹಿತೆಯ ಮನೆಯಲ್ಲಿ ವಿಚಾರಿಸಿದೆಯಾ?"

"ಹತ್ತಿರ ಯಾರೂ ಇಲ್ಲ. ಯಾರಾಯರು ಎಲ್ಲಿದ್ದಾರೆ ಅಂತ ಸರಿಯಾಗಿ ಗೊತ್ತಿಲ್ಲ. ಅಮ್ಮನಿಗೆ ನಾನೇ ಏನೋ ಸುಳ್ಳು ಹೇಳಿದ್ದೀನಿ ಈಗ ನಾನೇನು ಮಾಡಲಿ?"

"ತಡಿ. ಮೋಹನನ್ನ ನಿನ್ನ ಜತೆ ಕಳಿಸ್ತೀನಿ. ಸ್ಕೂಲಿಗೇ ಹೋಗಿ ವಿಚಾರಿಸುವಂತೆ. ಏನಾದರೂ ಫಂಕ್ಷನ್ ಇರಬಹುದೇನೋ"

"ಫಂಕ್ಷನ್ ಇದ್ದಿದ್ದರೆ ಅವಳು ಹೇಳಿರುತ್ತಿದ್ದಳು."

"ಅದೂ ಸರಿ. ಆದರೂ ಹೋಗಿ ವಿಚಾರಿಸೋಣ. ಏನೀಗ? ನಾನೂ ಬರ್ತೀನಿ" ಎಂದು ಮಾಲತಿ ಅವಳ ಜೊತೆಯಲ್ಲಿ ಹೊರಟಳು. ಮೋಹನನಿನ್ನೂ ಮನೆಗೆ ಬಂದಿರಲಿಲ್ಲ. ಆಟೋಗಾಗಿ ಕಾದು ನಿಂತಿದ್ದಾಗ ಮೋಹನ ಎದುರಾದ.

"ಅದೇನು ಇಷ್ಟು ಹೊತ್ನಲ್ಲಿ ಹೊರಟಿದೀರಿ ಇಬ್ಬರೂ...?"

ಮಾಲತಿ ವಿಷಯ ತಿಳಿಸಿದಳು. ಅವನೂ ಆತಂಕಗೊಂಡ. "ನೀವುಗಳು ಮನೆಗೆ ಹೋಗಿ. ನಾನು ಹುಡುಕಿಕೊಂಡು ಬರ್ತೀನಿ"

"ಎಲ್ಲೀಂತ ಹುಡುಕ್ತೀಯಾ? ಅವಳ ಸ್ನೇಹಿತೆಯರು ಯಾರೂಂತ ಸಹ ಗೊತ್ತಿಲ್ಲ ನಿನಗೆ"

"ಒಂದು ಸಲ, ರಾಗಿಣೀನ ಸ್ಕೂಲಿಗೆ ಬಿಡುವಾಗ, ಒಬ್ಬಸ್ನೇಹಿತೆಯ ಮನೆಯನ್ನು ತೋರಿಸಿದ್ದಳು. ಅಲ್ಲಿ ಹೋಗಿ ವಿಚಾರಿಸ್ತೀನಿ" ಅವನು ಹಾಗೇ ಹಿಂತಿರುಗಿ ಹೊರಟ. ಇಬ್ಬರೂ ಮನೆಗೆ ಬಂದರು.

ಇವನು ಆ ಸ್ನೇಹಿತೆಯ ಮನೆಯ ತಿರುವಿನಲ್ಲಿ ಬಂದಾಗ, ರಾಗಿಣಿ ಒಬ್ಬ ಹುಡುಗನ ಜತೆ ಮಾತನಾಡುತ್ತಾ ನಿಂತಿರುವುದನ್ನು ಕಂಡ. ಅವಳ ಎದುರಿಗೆ ಸ್ಕೂಟರನ್ನು ನಿಲ್ಲಿಸಿದ. "ಇಲ್ಲೇನು ಮಾಡಿದ್ತೀಯಾ? ಮನೇಲಿ ನಿನಗೋಸ್ಕರ ಕಾಯ್ತಾಇದ್ದಾರೆ ನಡೀ" ಸ್ವಲ್ಪ ಗದರಿಕೆಯ ಧ್ವನಿಯಲ್ಲಿ ನುಡಿದ.

"ನಾನು ಹೋಗ್ತೀನಿ ಅರುಣ್ ನೀನು ಹೋಗು" ಎಂದಳು.

ಮೋಹನನಿಗೆ ಆಶ್ಚರ್ಯವಾಗಿತ್ತು. ಇಷ್ಟು ಚಿಕ್ಕ ಹುಡುಗಿ, ಬಾಯ್ ಫ್ರೆಂಡ್ ಜತೆ, ಹೀಗೆ ತಿರುಗುವುದು ಎಂದರೇನು!

"ಏಯ್ ಯಾರೋ ನೀನು?" ಅವನ ಷರಟು ಹಿಡಿದೆಳೆದ. ಆ ಹುಡುಗ ಹೆದರಲಿಲ್ಲ. 'ಬಿಡ್ರೀ' ಎನ್ನುತ್ತಾ ಒದರಿಕೊಂಡು, "ನಾನು ಯಾರು ಅಂತ ರಾಗಿಣೀನ ಕೇಳಿ" ಎಂದು ಅಲ್ಲಿ ನಿಲ್ಲದೇ ತನ್ನ ಪಾಡಿಗೆ ಹೊರಟುಹೋದ ಆ ಹುಡುಗ.

"ಹುಂ, ಹತ್ತು" ಎಂದ. ಅವಳು ಕೂತೊಡನೆ ವೇಗವಾಗಿ ಸ್ಕೂಟರನ್ನು ಓಡಿಸಿ ತಮ್ಮ ಮನೆ ಮುಂದೆ ನಿಲ್ಲಿಸಿದ. ರಾಗಿಣಿಯನ್ನು ನೋಡಿದ. ಅವಳು ಯಾವ ಅಳುಕೂ ಇಲ್ಲದೇ ಮನೆಯೊಳಗೆ ಹೋದುದ್ದನ್ನು ಗಮನಿಸಿದ. ಮಾಲತಿಯನ್ನು ಒಂದು ಕಡೆ ಕರೆದು ಹೇಳಿದ, "ಯಾವನೋ ಬಾಯ್ ಫ್ರೆಂಡ್ ಜತೆ ಮಾತನಾಡ್ತಾ ನಿಂತಿದ್ದಳು. ಅದೇನು ಅಂತ ಸರಿಯಾಗಿ ವಿಚಾರಿಸಿ ತಿಳಿದುಕೊಳ್ಳಿ. ಸುಮ್ಮನೇ ಬೈಯಬೇಡಿ"

ಆದರೆ ರಾಗಿಣಿಯನ್ನು ಕೇಳಿದಾಗ ಅವಳು ಹೇಳಿದ್ದೇ ಬೇರೆ.

"ನಮ್ಮ ಟೀಚರ್ ಒಬ್ಬರು ಸತ್ತುಹೋದರು. ನಮ್ಮನ್ನೆಲ್ಲ ಅವರ ಮನೆಗೆ ಕರೆದುಕೊಂಡು ಹೋಗಿದ್ರು. ಅಲ್ಲೇ ಹೊತ್ತಾಗಿ ಹೋಯ್ತು. ಅವನು ನನ್ನ ಕ್ಲಾಸ್‌ಮೇಟ್ ಅರುಣ ಅಂತ. ಅವರ ಮನೆ ಪಕ್ಕದಲ್ಲೇ ಇದ್ದಾನೆ. ನಾನೇ ಅವನನ್ನು ಬಸ್‌ಸ್ಟಾಂಡಿನ ತನಕ ಬಾ ಅಂತ ಕರೆದೆ. ಅಷ್ಟರಲ್ಲಿ ಮೋಹನ ಅಲ್ಲಿಗೆ ಬಂದ."

ಅವಳು ನಿಜವನ್ನೇ ಹೇಳುತ್ತಿರಬಹುದು ಎನಿಸಿದರೂ ಗಾಬರಿಯಾಗಿತ್ತು. ಮೋಹನನ ಆತಂಕಕ್ಕೆ ಏನು ಕಾರಣವಿದೆಯೋ, ಇಲ್ಲವೋ ತಿಳಿಯದಾಗಿತ್ತು. ಮಾಲತಿ, ಮೋಹನ ಹೇಳಿದ್ದನ್ನು ಮಧುರನಿಗೆ ತಿಳಿಸಲಿಲ್ಲ.

"ಸಧ್ಯ ಬಂದೆಯಲ್ಲಾ ಪುಣ್ಯಾತ್ಗಿತ್ತೀ. ಸಾಯಂಕಾಲದಿಂದ ಎಲ್ಲಿ ಹೋದೆಯೋ ಅಂತ ಗಾಬರಿಯಾಗಿತ್ತು. ನಡೀ ಹೋಗೋಣ."

"ತಡೀ, ಕಾಫಿ ತಿಂಡಿ ಕೊಡ್ತೀನಿ" ಎನ್ನುತ್ತಾ ಮಾಲತಿ, ಇಬ್ಬರನ್ನು ಒಳಕ್ಕೆ ಕರೆದುಕೊಂಡು ಹೋದಳು.

ಇದ್ದಕ್ಕಿದ್ದಂತೆ ಮೋಹನನ ಮನಸ್ಸು ಪ್ರಕ್ಷುಬ್ಧಗೊಂಡಿತ್ತು. ತಳಮಳ ಹೆಚ್ಚಿದಂತಾಗಲು, ಸೀದಾ ಮಧುರಳ ಮನೆಗೆ ಬಂದ. ಆತ ಹೆಣ್ಣು ಮಕ್ಕಳಿಗಾಗಿ ಕಾಯುತ್ತಾ ನಿಂತಿದುದನ್ನು ಗಮನಿಸಿದ. ಕಾಲು ಇನ್ನು ಪೂರ್ತಿ ಸರಿಯಾಗಿಲ್ಲವೆನ್ನುವುದು ನೆನಪಿಗೆ ಬಂದು, ಅನುಕಂಪ ಮೂಡಿತು.

"ರಾಗಿಣಿ ನಮ್ಮ ಮನೆಗೆ ಬಂದಿದ್ದಳು. ಇಬ್ಬರೂ ಆಮೇಲೆ ಬರ್ತಾರೆ" ಎಂದು ತೋಚಿದ್ದನ್ನು ಹೇಳಿದ. ಆತ ಸಮಾಧಾನಗೊಂಡರು.

"ಯಾಕೋ ಏನೋ ಇವತ್ತಿನಷ್ಟು ಗಾಭರಿ ಎಂದೂ ಆಗಿರಲಿಲ್ಲ. ನನಗೆ ಹೊರಗೆ ಹೋಗದೇ ಇರುವಂತಹ ನನ್ನ ಸ್ಥಿತಿಯೇ ಕಾರಣವೇನೋ?"

"ಗಾಭರಿ ಏಕೆ? ನಿಮ್ಮ ಹೆಣ್ಣುಮಕ್ಕಳು ಧೈರ್ಯವಂತರು, ತಿಳುವಳಿಕೆಯುಳ್ಳವರು."

"ಹೌದಪ್ಪಾ, ಆದರೂ ಕಾಲ ಕೆಟ್ಟದ್ದು. ರಾಗಿಣಿ ಇನ್ನೂ ಚಿಕ್ಕವಳು. ಅಲ್ಲದೇ ಸ್ವಲ್ಪ ದುಡುಕಿನ ಸ್ವಭಾವ. ನಮ್ಮ ಮಧುರ ಹಾಗಲ್ಲ. ತುಂಬಾ ನಿಧಾನಸ್ಥೆ"

ರಾಗಿಣಿಯ ವಿಷಯ ತಿಳಿಸಿ, ಇನ್ನು ಎಷ್ಟು ದಿನ ನಿಮ್ಮ ಹೆಣ್ಣುಮಕ್ಕಳನ್ನು ಮನೆಯಲ್ಲಿ ಕಟ್ಟಿ ಹಾಕಿರ್ತೀರಿ ಎಂದು ಕೇಳುವ ಮನಸ್ಸಾದರೂ ತಡೆದುಕೊಂಡ. ರಾಗಿಣಿಯ ಬಗ್ಗೆ ತಾನು ಚಾಡಿ ಹೇಳುವುದು ಸರಿಯಲ್ಲ. ಅಲ್ಲದೇ ಈತ ನಂಬುತ್ತಾರೋ ಇಲ್ಲವೋ ಎಂದು ಕೊಂಡು "ನಾನಿನ್ನು ಬರ್ತೀನಿ" ಎಂದ.

"ಏನಪ್ಪಾ ಅವಸರ? ಕೂತ್ಕೋ. ನನಗೂ ಹೊತ್ತು ಹೋಗದು. ತಿಂಡಿ ಕಾಫಿ ತಿಂದು ಹೋಗೂವಂತೆ"

ಆತನ ಮುಗ್ಧತನಕ್ಕೆ ನಗು ಬಂತು. ಬರೀ ತಿಂಡಿ ಕಾಫಿ ಮಾತು ಇಷ್ಟೇ ಚಿಂತೆ. ಮಕ್ಕಳು ಬೆಳೆದುನಿಂತಿದ್ದಾರೆ. ಅವರ ಮದುವೆ ಬಗ್ಗೆ ಚಿಂತೆ ಇಲ್ಲವೇ ಎಂದು ಕೊಂಡ. "ಮನೇಲಿ ಎಲ್ಲಾ ಆಗಿದೆ. ನಾನಿನ್ನು ಬರ್ತೀನಿ" ಎಂದು ಹೊರಟೇ ಬಿಟ್ಟ. ಯಾಕೋ ಮನಸ್ಸಿಗೆ ಬೇಸರವೆನಿಸಿತ್ತು. ಎಲ್ಲೆಲ್ಲೋ ತಿರುಗಾಡಿಕೊಂಡು ಮನೆಗೆ ಬಂದ. ಅಕ್ಕತಂಗಿಯರು ಹೊರಟುಹೋಗಿದ್ದರು. ಮಾಲತಿ ಏನೂ ನಡೆದಿಲ್ಲವೆಂಬಂತೆ ನಿತ್ಯದಂತೆ ಇದ್ದಾಗ ಅವನಿಗೆ ಅಚ್ಚರಿ ಎನಿಸಿತ್ತು.

ತನಗೇಕೆ ಇಂತಹ ತಳಮಳ.... ಹಾಗಾದರೆ ನಾನು ನೋಡಿದ್ದು, ಅನುಮಾನಿಸಿದ್ದು ಸುಳ್ಳೆ, ಮಾಲತಿ ಎಂದಾದರೂ, ಹೀಗೆ ಬೇರೆ ಒಬ್ಬ ಹುಡುಗನ ಜತೆ ನಿಂತಿದ್ದುದನ್ನು ಕಂಡಿದ್ದರೆ, ಇಬ್ಬರಿಗೂ ಚೆನ್ನಾಗಿ ಬಾರಿಸುತ್ತಿದ್ದನೇನೋ, ಆದರೆ ರಾಗಿಣಿ ನನ್ನ ಸ್ವಂತ ತಂಗಿ ಅಲ್ಲವಲ್ಲ.... ರಾಗಿಣಿಗೆ ತಿಳುವಳಿಕೆ ಹೇಳುವುದು ಹೇಗೆ.... ಅವಳಿಗೆ ತಿಳುವಳಿಕೆ ಹೇಳಲು ನಾನ್ಯಾರು?

'ನೀವು ಅಕ್ಕನ ಜತೆ ಸುತ್ತುವುದಿಲ್ಲವೆ' ಎಂದು ಬಿಟ್ಟರೆ? ಅವಳು ಅಂತಹವಳೇ.... ನಾನು, ಮಧುರ ಆಗ ಈಗ ಸ್ಕೂಟರ್ನಲ್ಲಿ ಓಡಾಡುವುದನ್ನು

ಮಾತನಾಡುವುದನ್ನು ನೋಡಿದ್ದಾಳೆ..... ಅದೇ ಆಸೆ ಅವಳಿಗೂ ಮೂಡಿರಬಹುದು. ತಿಳಿಯದ ವಯಸ್ಸಲ್ಲಿ ಯಾವನೋ ಫ್ರೆಂಡ್ ಜತೆ ಬೀದಿಯಲ್ಲಿ ನಿಲ್ಲುವಷ್ಟು ಧೈರ್ಯ ಅವಳಿಗೆ ಬರಬೇಕಾದರೆ....? ಛೆ. ರಾಗಿಣಿ ಒಳ್ಳೆಯ ಹುಡುಗಿ ಅಂದ್ಕೊಂಡಿದ್ದೆ. ಆದರೆ ಈಗ ಅದಕ್ಕೆ ನಾನೇ ಕಾರಣನಾದೆನೇ? ಸುಮ್ಮನೇ ಏನೇನೋ ಚಿಂತಿಸಿ ತಲೆ ಕೆಡಿಸಿಕೊಂಡ. ತಾನೇಕೆ ಹೀಗೆ ಅನಾವಶ್ಯಕವಾಗಿ ಚಿಂತಿಸುತ್ತೀನಿ ಎಂದು ತನಗೆ ತಾನೇ ಹೇಳಿಕೊಂಡ. ಎರಡು ದಿನಗಳು ಕಳೆದವು. ಮಾರನೇದಿನ ಭಾನುವಾರವಾಗಿತ್ತು. ಆದರೂ ಬೇಗನೇ ಎದ್ದು ನಿತ್ಯದಂತೆ ಸಿದ್ಧನಾದ.

"ನನಗೆ ಸ್ವಲ್ಪ ಕೆಲಸವಿದೆ. ಹೊರಗೆ ಹೋಗಿ ಬರ್ತೀನಿ" ಎಂದು ಸ್ಕೂಟರನ್ನು ಹತ್ತಿ ಹೊರಟ. ಸೀದಾ ಮಧುರಳ ಮನೆಗೆ ಬಂದ. ಆತ ಗೇಟಿಗೆ ಕೈ ಊರಿಕೊಂಡು ನಿಂತಿದ್ದರು. "ನಾನು ನಿಮ್ಮ ಹತ್ತಿರ ಸ್ವಲ್ಪ ಮಾತನಾಡಬೇಕು" ಎಂದ ಅವರೆದುರಿಗೆ ನಿಂತು

"ಏನಪ್ಪಾ ವಿಷಯ, ಒಳಗೆ ಬಾ.... ಎಂದರು ಗೇಟನ್ನು ತೆಗೆಯುತ್ತಾ."

"ಮಧುರಳ ಮದುವೆಯ ವಿಷಯ, ನಾನು ಅವಳನ್ನು ಮದುವೆಯಾಗಬೇಕು ಅಂತ ಅಂದ್ಕೊಂಡಿದೀನಿ."

ಆತ ನಿಂತರು. ಅವನನ್ನೇ ನೇರವಾಗಿ ಒಂದು ಗಳಿಗೆ ನೋಡಿದರು. ಅವನು ಚಡಪಡಿಸಿದ. "ಮೊದಲು, ನಾನು ಒಂದು ವಿಷಯ ತಿಳಿಸಬೇಕು. ಆದರೆ ಇಲ್ಲಿ ನಮ್ಮಮನೆಯಲ್ಲಿ ಬೇಡ, ನನ್ನನ್ನು ಹೊರಗೆಲ್ಲಾದರೂ ಕರೆದುಕೊಂಡು ಹೋಗು. ಪಾರ್ಕು, ದೇವಸ್ಥಾನದ ಕಟ್ಟೆ, ಯಾವುದಾದರೂ ಸರಿ. ವಿಷಯ ತುಂಬಾ ಇದೆ"

ಆತನ ಮಾತು ಒಗಟಿನಂತೆ ತೋರಿತು. ತನ್ನ ಮಾತಿನಿಂದ ಆತನಿಗೆ ಸಂತೋಷವಾಗಿದೆಯೋ, ಗಾಭರಿಯಾಗಿದೆಯೋ, ತಿಳಿಯಲಿಲ್ಲ. ಬಾಗಿಲಿನಲ್ಲಿ ನಿಂತಿದ್ದ ರಾಗಿಣಿಯನ್ನು ಹತ್ತಿರ ಕರೆದು, "ನಾನು ಸ್ವಲ್ಪ ಹೊರಗೆ ಹೋಗಿ ಬರ್ತೀನಿ. ಅಮ್ಮನಿಗೆ ಹೇಳಿಬಿಡು" ಎಂದು ಮೋಹನನೊಂದಿಗೆ ಹೊರಟರಾತ.

ಎಂದಿನಂತೆ 'ಏನೇ ಗಿಣಿ' ಎಂದು ಮಾತನಾಡಿಸುವ ಮನಸ್ಸಾಗಲಿಲ್ಲ ಅವನಿಗೆ. ಸುಮ್ಮನೇ ಅವಳ ಕಡೆ ನೋಡಿದ. ನಿಷ್ಕಲ್ಮಶವಾದ ಮುಖ ನೋಡಿ, ವ್ಯಥೆ ಎನಿಸಿತು. ಆತ ಪ್ರಯಾಸದಿಂದ ಹಿಂದಿನ ಸೀಟನ್ನು ಏರಿ ಕುಳಿತರು. ನಿಧಾನವಾಗಿ ಸ್ಕೂಟರನ್ನು ಓಡಿಸಿದ.

ಯಾವುದೋ ಗೋಜಲಿಗೆ ಸಿಕ್ಕಿ ಕೊಳ್ಳುತ್ತಿದ್ದೇನೆಯೋ ಏನೋ.... ಇಬ್ಬರು

ಪ್ರೀತಿಸಿದಾಗ, ಮನಃಸ್ಥಿತಿ ಹೀಗೆ ಕೆಡುತ್ತೆ ಅಂತ ಗೊತ್ತಿದ್ದರೆ, ತಾನೂ ಮನೋಹರನಂತೆ ಅಮ್ಮ ನೋಡಿದ ಹೆಣ್ಣನ್ನು ನೋಡಿ ಒಪ್ಪಿದ್ದರೂ ಆಗಿತ್ತು ಎನಿಸಿತ್ತು. ಆದರೆ ಮನದ ಮುಂದೆ ಮಧುರಳ ಮುಖ ತೇಲಿಬಂದಾಗ, ಅವಳು ತನ್ನವಳು... ಅವಳು ತನ್ನವಳಾಗಲೇಬೇಕು ಎಂದು ನಿರ್ಧರಿಸಿದ.

ವಿಶಾಲವಾದ ಅಶ್ವತ್ಥಕಟ್ಟೆಯ ಹತ್ತಿರ ಸ್ಕೂಟರನ್ನು ನಿಲ್ಲಿಸುವಂತೆ ಆತ ಹೇಳಿದರು. ಕಲ್ಲಿನ ಹಾಸಿನ ಮೇಲೆ ಇಬ್ಬರೂ ಕುಳಿತರು. ಆತ ಅಲ್ಲಿದ್ದ ನಾಗರಕಲ್ಲುಗಳಿಗೆ ಮಂದಿಸಿ, ಮಾತಿಗೆ ಪ್ರಾರಂಭಿಸಿದರು.

"ನಮ್ಮದೇ ಬೇರೆ ಪಂಗಡ, ನೀವೇ ಬೇರೆ ಪಂಗಡ, ನಿಮ್ಮ ತಂದೆ ತಾಯಿ ಒಪ್ಪುವರೇ?" ನೇರವಾಗಿ ಕೇಳಿದ್ದರು.

"ಹುಂ. ಅದೇನು ಅಡ್ಡಿ ಬಂದಿಲ್ಲ"

"ಸರಿ. ನಮಗೂ, ನಿನ್ನಂತಹ ಯೋಗ್ಯ ಅಳಿಯಬೇಕು. ನಾವಾಗಿಯೇ ನಿಮ್ಮನ್ನು ಕೇಳುತ್ತಿದ್ದೆವೋ ಇಲ್ಲವೋ, ಈಗ ನೀನಾಗಿಯೇ ಕೇಳುತ್ತಿರುವಾಗ ಬೇಡ ಎನ್ನುವ ಪ್ರಶ್ನೆಯೇ ಬರುವುದಿಲ್ಲ. ನಿನ್ನನ್ನು ಕಂಡಾಗೆಲ್ಲಾ, ನಿನಂತಹ ಒಬ್ಬ ಮಗ ನನಗೂ ಇರಬಾರದಾಗಿತ್ತೇ ಅಂತ ಅನ್ನಿಸುತ್ತಿತ್ತು. ನನಗೆ ಈಗ, ಮಗ ಬೇರೆ ಅಲ್ಲ; ಅಳಿಯ ಬೇರೆ ಅಲ್ಲ. ನಿನ್ನ ಒಳ್ಳೆಯತನದ ದುರುಪಯೋಗ ಪಡಿಸಿಕೊಳ್ಳುವ ಆಸೆ ನನಗೆ ಖಂಡಿತಾ ಇಲ್ಲ."

"ಏನೇನೋ ಆಡ್ತಿದೀನಿ ಅಂತ ನೀನು ಭಾವಿಸಬಹುದು. ನಿನಗೆ ತಿಳಿಯದೇ ಇರುವ, ತಿಳಿಸಲೇಬೇಕಾದ ಒಂದು ಮುಖ್ಯವಾದ ವಿಷಯವಿದೆ....."

"ವೈದೇಹಿಗೆ ನಾನು ಎರಡನೇ ಗಂಡ...."

ಮನೋಹರ ಚಕಿತನಾದ. ಈ ವಿಷಯ ಯಾರಿಗೂ ತಿಳಿದಿರಲಿಲ್ಲ.

"ಅವಳು ನಮ್ಮ ಸಂಬಂಧಿ ಯಾಗಿರಲಿಲ್ಲ. ನಮ್ಮ ಊರಿನವಳೇ.... ಅವಳು ಯಾರೋ ಒಬ್ಬ ಭಾರೀ ಶ್ರೀಮಂತನನ್ನು ಮದುವೆಯಾಗಿದ್ದಳು. ಮದುವೆಯಾದ ಎರಡು ಮೂರು ವರ್ಷದಲ್ಲಿ ಅವಳ ಗಂಡ ತೀರಿಕೊಂಡ. ಅವಳು ತನ್ನ ಒಂದು ವರ್ಷದ ಮಗುವಿನೊಡನೆ ತವರು ಸೇರಿದಳು. ಅವಳ ಸ್ಥಿತಿಗೆ ನನಗೆ ಮರುಕವೆನಿಸಿತ್ತು. ಅವಳ ಗಂಡನ ಮನೆಯವರು ಆಸ್ತಿಯನ್ನು ಕೊಡಲು ತಕರಾರು ಮಾಡಿದಾಗ, ನಾನು ಲಾಯರನ್ನು ಗೊತ್ತುಮಾಡಿ, ಅವಳಿಗೆ ಅವಳ ಭಾಗದ ಆಸ್ತಿ ಸಿಗುವಂತೆ ಮಾಡಿಕೊಟ್ಟೆ ನನ್ನ ಜತೆಯಲ್ಲಿ ಕೋರ್ಟ್ ಕಛೇರಿಗೆಂದು ಓಡಾಡುತ್ತಿದ್ದ ಅವಳ ಬಗ್ಗೆ ಜನ ಏನೇನೋ ಆಡಿದರಂತೆ. ನನಗೆ ವಿಷಯ ತಿಳಿದಾಗ, ಸುಳ್ಳು ಆಡಿ ಆರೋಪ ಹೊರಿಸುವ

ಜನರ ಮಾತನ್ನು ನಿಜವೇಕೆ ಮಾಡಬಾರದು ಅಂತ ಅನ್ನಿಸಿ, ಅವಳನ್ನು ಮದುವೆಯಾಗಲು ತೀರ್ಮಾನಿಸಿದೆ. ಅವಳ ತಂದೆ ತಾಯಿಯಾಗಲಿ, ನಮ್ಮ ಮನೆಯವರಾಗಲೀ ಈ ಮದುವೆಗೆ ಸಮ್ಮತಿಸಲಿಲ್ಲ. ವೈದೇಹಿ ಸಹ ಅವರ ಮಾತುಗಳಿಗೆ ಮನ್ನಣೆ ಇತ್ತಳು."

"ಈ ಮಧ್ಯೆ ಒಂದು ದಿನ ತನ್ನ ಮಗುವನ್ನು ಡಾಕ್ಟರಿಗೆ ತೋರಿಸಲೆಂದು ಆಸ್ಪತ್ರೆಗೆ ಕರೆದುಕೊಂಡು ಹೋದವಳು ವಾಪಸ್ಸು ಬರಲಿಲ್ಲವಂತೆ. ಅವರುಗಳು ಅನುಮಾನದಿಂದ ನಮ್ಮ ಮನೆಗೆ ಬಂದರು. ನಾನು ಮನೆಯಲ್ಲೇ ಇದ್ದೆ. ಅವರಿಗೆ ಏನನ್ನಿಸಿತೋ ತಮ್ಮ ಪಾಡಿಗೆ ತಾವು ಹೊರಟುಹೋದರು. ಆನಂತರ, ನಾನು ಅವಳನ್ನು ಹುಡುಕಲು ಯತ್ನಿಸಿದೆ. ಕಂಪ್ಲೆಂಟ್‌ಕೊಡಲೆಂದು ಪೊಲೀಸ್ ಸ್ಟೇಷನ್ನಿಗೆ ಹೋದಾಗ ಅವಳೇ ಅಲ್ಲಿ ಕುಳಿತಿದ್ದುದನ್ನು ಕಂಡೆ. ನನ್ನನ್ನು ಕಂಡು ಅಳಲಾರಂಭಿಸಿದಳು. ನಿಧಾನವಾಗಿ ವಿಷಯ ತಿಳಿಯಿತು."

"ಡಾಕ್ಟರ್, ಅವಳ ಮಗು ನಾರ್ಮಲ್ ಆಗಿಲ್ಲವೆಂದು ತಿಳಿಸಿದ್ದುದು ಅವಳಿಗೆ ಷಾಕ್ ಆಗಿತ್ತು. ಮೊದಲೇ ತನಗೆ ಹೀಗೆ, ಈ ಹೆಳವ ಮಗುವನ್ನು ಇಟ್ಟುಕೊಂಡು ಜೀವಮಾನವೆಲ್ಲ ಕಳೆಯಬೇಕಾದ ಸ್ಥಿತಿಗಿಂತ ಆತ್ಮಹತ್ಯೆಯೇ ವಾಸಿಎಂದು ಕೊಂಡು, ಊರಾಚೆ ಇದ್ದ ಯಾವುದೋ ಬಾವಿಯ ಕಟ್ಟೆಯ ಮೇಲೆ ಕುಳಿತಿದ್ದಳಂತೆ. ಪೋಲೀಸರು ಕೇಳಿದಾಗ ಸರಿಯಾಗಿ ಉತ್ತರ ಹೇಳದಿದ್ದುದನ್ನು ಕಂಡು, ಅವಳನ್ನು ಅಲ್ಲಿಗೆ ಕರೆದುಕೊಂಡು ಬಂದು ತನಿಖೆ ನಡೆಸಿದ್ದರು."

"ನಾನು ಅವಳ ಸ್ಥಿತಿಯನ್ನು ಅವರುಗಳಿಗೆ ತಿಳಿಸಿದೆ. ಅವಳು ಮತ್ತೆ ತನ್ನ ತಂದೆ ತಾಯಿಯ ಮನೆಗೆ ಹೋಗಲು ಅನುಮಾನಿಸಿದಳು. ಅವಳ ಅನುಮಾನ ನನಗೆ ಅರ್ಥವಾಗಿತ್ತು. ಆ ಕ್ಷಣ ನಾನೇ ಬಲವಾದ ತೀರ್ಮಾನ ತೆಗೆದುಕೊಂಡು, ಅವಳನ್ನು ಪೋಲಿಸ್ ಕಸ್ಟಡಿಯಲ್ಲಿ ಬಿಟ್ಟು ನಮ್ಮ ಮನೆಗೆ ಬಂದು, ನನ್ನ ಕೆಲವು ವಸ್ತುಗಳನ್ನು ಪ್ಯಾಕ್ ಮಾಡಿಕೊಂಡು, ಅಲ್ಲಿಗೆ ಬಂದೆ. ಅವರುಗಳ ಸಮ್ಮುಖದಲ್ಲಿ ಅವಳ ಹಣೆಗೆ ಕುಂಕುಮವನ್ನಿಟ್ಟು, ಅವಳು ನನ್ನ ಹೆಂಡತಿ ಎಂದು ಘೋಷಣೆ ಕೊಟ್ಟೆ. ಅಲ್ಲಿದ್ದ ರಿಜಿಸ್ಟರ್ ಬುಕ್‌ನಲ್ಲಿ ಸಹಿ ಮಾಡಿದೆ. ಅಷ್ಟು ಹೊತ್ತಿಗೆ ಸಾಯಂಕಾಲ ಕಳೆದಿತ್ತು. ಆ ರಾತ್ರಿಯ ಟ್ರೈನು ಹಿಡಿದು ಬೆಂಗಳೂರಿಗೆ ಬಂದು ನೆಲೆಸಿದೆವು."

"ನನ್ನ ಹತ್ತಿರ ಸ್ವಲ್ಪ ಹಣವಿತ್ತು. ಅವಳ ಹಣವೂ ಇತ್ತು. ಮೊದಲು ಆ ಮಗುವನ್ನು ತಜ್ಞ ಡಾಕ್ಟರರ ಹತ್ತಿರ ಕರೆದುಕೊಂಡು ಹೋಗಿ, ಎಲ್ಲಾ

ರೀತಿಯ ಪರೀಕ್ಷೆಗಳನ್ನು ಮಾಡಿಸಿದೆವು. ಆದರೆ ಏನೂ ಉಪಯೋಗವಾಗಲಿಲ್ಲ. ಮಿದುಳು ಬೆಳೆಯದೇ ಇದ್ದ ಕಾರಣ, ತಿಳುವಳಿಕೆ ಬೆಳೆಯಲಿಲ್ಲ. ದೇಹವೂ ಓರೆ ಕೋರೆಯಾಗಿ ಬೆಳೆಯಿತು. ತಜ್ಞರ ಸಲಹೆಯಂತೆ ಅವನನ್ನು ಅಂಗವಿಕಲರ ಸಂಸ್ಥೆಗೆ ಸೇರಿಸಿದೆ. ಅಂದಿನಿಂದ ಅವನು ಅಲ್ಲಿಯೇ ಇದ್ದಾನೆ. ಇದುವರೆವಿಗೂ ಏನೂ ಸುಧಾರಿಸಿಲ್ಲ. ಅವನಿಗಾಗಿ ಪ್ರತಿ ತಿಂಗಳೂ ಹಣ ಕಟ್ಟುತ್ತೇನೆ. ಹೋಗಿ ನೋಡಿಕೊಂಡು ಬರುತ್ತೇವೆ"

"ಆದರೆ ಈ ವಿಷಯ ಬೇರೆ ಯಾರಿಗೂ ತಿಳಿಯದು. ಮಧುರ, ರಾಣಿಣಿಯರಿಗೂ ಸಹ ತಿಳಿಯದು. ನಾನು ಹೆಚ್ಚಿಗೆ ಓದಿದವನಲ್ಲವಾದ್ದರಿಂದ , ಒಂದು ಶಿಕ್ಷಣ ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿದೆ. ಈಗಲೂ ನನಗೆ ಪೆನ್ಷನ್ ಬರುತ್ತೆ. ಈ ಬೆಂಗಳೂರಿನಂತಹ ಊರಿನಲ್ಲಿ ನನಗೆ ಒಂದು ಸ್ವಂತ ಮನೆ ಇಲ್ಲ. ಇಪ್ಪತ್ತೈದು ವರ್ಷಗಳಿಂದ ಐವತ್ತು ರೂಪಾಯಿ ಬಾಡಿಗೆಯ ಈ ಮನೆಯಲ್ಲಿ ನಾನು ಇದೀನಿ. ಇನ್ನು ನಮ್ಮ ಅಂತಸ್ತು, ಸ್ಥಿತಿಗತಿ ನಿನಗೆ ತಿಳಿದದ್ದೇ..... "

"ಏನಿಲ್ಲದೇನೇ ವೈದೇಹಿ, ತನಗೆ ಒದಗಿದ್ದ ಸ್ಥಿತಿಗಳಿಂದ ಪೆಚ್ಚಾಗಿ ಬಿಟ್ಟಿದ್ದಾಳೆ. ತಿಂಗಳು, ಎರಡು ತಿಂಗಳಿಗೊಮ್ಮೆ ಮಗನನ್ನು ನೋಡಿಕೊಂಡು ಬಂದ ಮೇಲೆ ಅವಳ ಮನಃಸ್ಥಿತಿಯನ್ನು ಹೇಳುವಂತೆಯೇ ಇಲ್ಲ. ಹುಶಾರಿಲ್ಲದವಳಂತೆ ಮಲಗಿಬಿಡ್ತಾಳೆ. ಆದರೆ ಯಾರಿಗೂ ತೊಂದರೆ ಕೊಡುವುದಿಲ್ಲ."

"ಆ ನಂತರ ಹುಟ್ಟಿದವಳು ಮಧುರ. ಅವಳಿಗೆ ಜನ್ಮ ಕೊಡುವಮೊದಲು ತತ್ತರಿಸಿಹೋಗಿದ್ದಳು. ಆದರೆ ಮುದ್ದಾದ ಬೊಂಬೆಯಂತೆ ಇದ್ದು ಮಗು, ಅವಳಿಗೆ ಎಷ್ಟೋ ಸಮಾಧಾನ ಕೊಟ್ಟಿರಬೇಕು. ಆದರೆ ಎಂದೂ ಅತಿಶಯವಾದ ಪ್ರೀತಿ ತೋರಿಸಿದವಳಲ್ಲ. ಬರೀ ಕರ್ತವ್ಯವೆಂಬಂತೆ ಬೆಳೆಸಿದಳು. ಆದ್ದರಿಂದಲೋ ಏನೋ ತಾಯಿ ಮಗಳಲ್ಲಿ ಸಲುಗೆ ಇಲ್ಲ. ಚಿಕ್ಕವಯಸ್ಸಿನ ಮಧುರ ಪ್ರೌಢೆಯಂತೆ ವರ್ತಿಸುವುದನ್ನು ಕಂಡಾಗ, ಒಂದು ತರಹ ಸಂಕಟವಾಗುತ್ತೆ."

"ಮಾಲತಿ ಅವಳ ಆಪ್ತ ಗೆಳತಿಯಾದಾಗ ನಾನು ಸಂತೋಷಪಟ್ಟೆ. ಮಾಲತಿಯಂತೆಯೇ ಚುರುಕಾದ, ಪಟಪಟನೆ ಅರಳು ಹುರಿದಂತೆ ಮಾತನಾಡುವ ಹುಡುಗಿಯಾಲಿ ಎಂದು ಬಯಸಿದೆ. ಆದರೆ, ಹೆಚ್ಚಿಗೆ ಬದಲಾವಣೆ ಕಾಣಲಿಲ್ಲ. ಇನ್ನೂ ಗಂಭೀರತೆಯನ್ನು ಹೆಚ್ಚು ಮಾಡಿಕೊಂಡಳು. ಮಾಲತಿಯನ್ನು ಬಿಟ್ಟರೆ ಬೇರೆ ಯಾರೂ ಸ್ನೇಹಿತೆಯರಿಲ್ಲ."

"ಅನಂತರ ಹತ್ತು ವರ್ಷಗಳ ಮೇಲೆ ರಾಗಿಣಿ ಹುಟ್ಟಿದಳು. ಆ ಮಗು

ಗಂಡು ಮಗುವಾಗಿರಲಿ ಎಂದು ನಾವು ಬಯಸಿದ್ದೆವು. ಆದರೆ ಅದನ್ನು ನಾವುಗಳು ಆಡಿ ತೋರಲಿಲ್ಲ. ಅವಳು ಮಧುರಳ ನೆಚ್ಚಿನ ತಂಗಿಯಾಗಿ ಬೆಳೆದಳು. ನಿನಗೆ ನೆನಪಿರಬಹುದು ಅಲ್ಲವೆ, ಅವಳು ಚೇಷ್ಟೆ ಮಾಡಿ ಅಮ್ಮನ ಕೈಯ ಹೊಡೆತ ತಿನ್ನುವುದನ್ನು ತಪ್ಪಿಸಲು ಮಧುರ ಅವಳನ್ನು ನಿಮ್ಮ ಮನೆಗೆ ಎತ್ತಿಕೊಂಡು ಬರುತ್ತಿದ್ದಳು."

"ಈಗ ರಾಗಿಣಿಗೂ ಹದಿಮೂರು ವರ್ಷ. ಮಧುರ ಹೆಚ್ಚಿಗೆ ಓದಲು ಇಚ್ಛಿಸಲಿಲ್ಲ. ನಾನೂ ಸುಮ್ಮನಾದೆ ರಾಗಿಣಿಗೆ ಇಷ್ಟವಿದ್ದರೆ ನಾವುಗಳು ಓದಿಸುತ್ತೀವಿ."

"ಇನ್ನೂ ಮದುವೆಯ ವಿಷಯ. ಇಷ್ಟೆಲ್ಲ ಹಿನ್ನೆಲೆ ಇರುವ, ನನ್ನ ಮಗಳಿಗೆ ಮದುವೆಯ ಮಾತನ್ನು ಎತ್ತಲು ನನಗೆ ಧೈರ್ಯವೇ ಇರಲಿಲ್ಲ. ಅವಳಾಗಿಯೇ ಅವಳು ಯಾರನ್ನೋ ಪ್ರೀತಿಸಿ, ಓಡಿ ಹೋಗುವವಳಲ್ಲ ಎಂದು ನನಗೆ ತಿಳಿದಿತ್ತು. ನನಗೆ ಅವಳ ಮೇಲೆ ತುಂಬಾ ನಂಬಿಕೆ. ನೀವು ಯಾವುದೋ ಕಾರಣದಿಂದ ಜತೆ ಜತೆಯಲ್ಲಿ ಓಡಾಡಿದರೂ, ನಾನು ಅನುಮಾನ ಪಡಲಿಲ್ಲ. ನಿಮ್ಮ ವರ್ತನೆಯೂ ಹಾಗಿರಲಿಲ್ಲ."

"ಈಗ ಅನ್ನಿಸ್ತಿದೆ ನನ್ನ ಮಗಳು ನಿಜವಾಗಿಯೂ ಅದೃಷ್ಟವಂತೆ. ನಿನ್ನಂತಹ ಗಂಡನನ್ನು ನಾನು ಹುಡುಕುವುದು ಸಾಧ್ಯವಿರಲಿಲ್ಲವೇನೋ, ಆದರೆ ಈಗಲೂ ನಿರ್ಧಾರ ನಿನ್ನ ಕೈಲಿದೆ. ನಿಧಾನವಾಗಿ ಯೋಚಿಸು. ಇಷ್ಟೆಲ್ಲ ತಿಳಿದ ಮೇಲೆ, ನೀನು ಹಿಂಜರಿದರೂ ನನಗೆ ಬೇಸರವಿಲ್ಲ." ಎಂದು ತಮ್ಮ ಕತೆಯನ್ನು ವಿವರಿಸಿದ ಶೇಷಾದ್ರಿ, ಅವನ ಮುಖವನ್ನೇ ನೋಡಿದರು.

ಒಂದು ಗಳಿಗೆ ತಡೆದ. "ಈ ವಿಷಯಗಳು ನನಗೆ ತಿಳಿದಿರಲಿಲ್ಲ. ಇದಕ್ಕೂ ಮಧುರಳನ್ನು ಮದುವೆಯಾಗದೇ ಇರುವುದಕ್ಕೂ ಏನೂ ಕಾರಣವಿಲ್ಲ" ಎಂದ.

"ಅದು ನಿನ್ನ ದೊಡ್ಡಗುಣ. ಆದರೆ ನಿನ್ನ ತಾಯಿ ಸಂಪ್ರದಾಯಸ್ಥರು. ಅವರಿಗೆ ಈ ವಿಷಯ ತಿಳಿದರೆ ಒಪ್ಪಿಗೆ ಕೊಡುತ್ತಾರೆಯೇ?" ಎಂಬ ಶಂಕೆ ವ್ಯಕ್ತಪಡಿಸಿದರು ಶೇಷಾದ್ರಿ.

ಅದು ಅವನೂ ಯೋಚಿಸಬೇಕಾದ ವಿಷಯ. ಮೊದಲೇ ಮಧುರಳನ್ನು ಕಂಡರೆ ಅಷ್ಟಕಷ್ಟೆ.... ಈಗ ಏನು ಮಾಡಬೇಕೆಂದು ತಿಳಿಯಲಿಲ್ಲ. ತಾನಾಗಿಯೇ ಏನನ್ನು ನಿರ್ಧರಿಸಲಾಗದ ಸ್ಥಿತಿ. ಬಲವಂತವಾಗಿ ತಾಯಿಯನ್ನು ಒಪ್ಪಿಸಲಾಗದ ಸ್ಥಿತಿ.

ಅವನ ಚಿಂತನೆ ಕಂಡು, ಆತನೇ ನುಡಿದರು.

"ಪರವಾಗಿಲ್ಲ. ನೀನು ನಿಧಾನವಾಗಿ ಯೋಚಿಸು. ಮಧುರನ್ನ ಗಂಡು ಹುಡುಗನಂತೆ ಬೆಳೆಸಿಲ್ಲ. ಆದರೆ ಆ ಹುಡುಗಿಯರ ಹೆಸರಿನಲ್ಲಿ ಬ್ಯಾಂಕಿನಲ್ಲಿ ಹಣವಿದೆ. ಸಂಗೀತ ಕಲಿಸಿದ್ದೇನೆ. ಅದು ಅವಳ ಜೀವನೋಪಾಯಕ್ಕೆ ಸಾಕು. ಆದರೆ ತಂದೆಯಾಗಿ ನಾನು ಕರ್ತವ್ಯ ನಿಭಾಯಿಸುವಲ್ಲಿ ಅಸಹಾಯಕ" ಆತ ಎದ್ದಾಗ ಅವನೂ ಎದ್ದ. ಅವರು ಹೆಜ್ಜೆ ಇಟ್ಟಾಗ ಇವನೂ ಹೆಜ್ಜೆ ಹಾಕಿದ.

ಅವರನ್ನು ಅವರ ಮನೆ ಮುಂದೆ ಇಳಿಸಿ, ನಂತರ ನುಡಿದ.

"ನಾನು ಮದುವೆಯಾಗುವುದಾದರೆ ಮಧುರನ್ನ ಮಾತ್ರ. ಯಾವುದೇ ಕಾರಣದಿಂದ ಭಿನ್ನಾಭಿಪ್ರಾಯ ಮೂಡಿದರೆ, ನಾನೂ ಬ್ರಹ್ಮಚಾರಿಯಾಗಿದ್ದು ಬಿಡುತ್ತೇನೆ. ಅವಳ ನೆನಪಿನಲ್ಲಿ ದಿನಗಳನ್ನು ಕಳೆಯುತ್ತೇನೆ." ಆತ ಸಪ್ಪನೆ ನಕ್ಕರು.

"ದುಡುಕಬೇಡ. ತಾಳ್ಮೆಯಿಂದ ಯೋಚಿಸು. ಇದು ದ್ವಾಪರಯುಗವಲ್ಲ. ಭೀಷ್ಮನಿಗೂ ಒಂದಲ್ಲ ಒಂದು ಸಲ, ತಾನು ಹಾಗೆ ಪ್ರತಿಜ್ಞೆಮಾಡಬಾರದಾಗಿತ್ತು ಅಂತ ಅನ್ನಿಸಿದ್ದಿರಬಹುದು. ಆದರೆ ಅದು ಕತೆಯಲ್ಲಿ ಸೂಚಿತವಾಗಿಲ್ಲ ಅಷ್ಟೆ. ನೀನು ಅಂತಹ ಯಾವ ನಿರ್ಧಾರವನ್ನು ತೆಗೆದುಕೊಳ್ಳಬಾರದು. ನಿನ್ನ ತಂದೆ ತಾಯಿರಿಗೆ ದುಃಖವಾಗುತ್ತೆ. ಕೆಲವರು, ಮಧುರಳನ್ನೇ ದೂಷಿಸಲೂಬಹುದು."

ಅವರ ಮಾತುಗಳಲ್ಲೂ ನಿಜಾಂಶವಿತ್ತು. ಆಗಲಿ ಎಂದು ನುಡಿದು ಮನೆಗೆ ಬಂದ.

ಊಟದ ಹೊತ್ತಿಗೆ ಕೆಟ್ಟ ಮುಖ ಹಾಕಿಕೊಂಡು ಮನೆಗೆ ಬಂದವನನ್ನೇ ಎಲ್ಲರೂ ನೋಡಿದರು. ಏನು ಅಂತ ಕೇಳಲು ಹಿಂಜರಿದರು. ತಾನು ಅವಳನ್ನು ಮದುವೆಯಾಗದಿದ್ದರೂ ಪರವಾಗಿಲ್ಲ. ಈ ವಿಷಯದ ಬಗ್ಗೆ ಪ್ರಸ್ತಾಪಿಸುವುದೇ ಬೇಡ ಎಂದು ನಿರ್ಧರಿಸಿದ.

ಎರಡು ದಿನ ಕಳೆಯುವಷ್ಟರಲ್ಲಿ ಅವನ ಕಳೆಯೇ ಬದಲಾಯಿಸಿ ಹೋಗಿತ್ತು. ಮಾಲತಿ ಕೇಳಿದ್ದರೂ ಏನೂ ಹೇಳಲಿಲ್ಲ. ತಂದೆ ಕೇಳಿದಾಗ, ಏನೋ ಆಫೀಸಿನ ವಿಷಯ ಎಂದಿದ್ದ. ಅವರು ಎಷ್ಟೇ ಏನೇ ಮಾತನಾಡಿದರೂ ಹಳೆಯ ಸಂಪ್ರದಾಯದವರು, ಎಂದು ಅನುಮಾನಿಸಿದ್ದ. ಮಧುರ ಸ್ನೇಹಿತೆಯನ್ನು ಮಾತನಾಡಿಸಲೆಂದು ಬಂದಾಗ, ಹೊರಗೆ ಬರುವ ಮನಸ್ಸೇ ಆಗಲಿಲ್ಲ.

ಮಧುರ ತಂದಿದ್ದ ತಿಂಡಿಗಳನ್ನೆಲ್ಲಾ ತಿನ್ನುವಾಗ ಇದ್ದಕ್ಕಿದ್ದಂತೆ ಮಾಲತಿಯ ಮನಸ್ಸಿಗೇ ಏನೋ ಹೊಳೆಯಿತು. ಅದನ್ನು ಪ್ರಯೋಗಿಸುವುದಕ್ಕೆ ಮುಂದಾದಳು. ಅದಕ್ಕೆ ಕಾರಣವೂ ಇತ್ತು.

ಹಿಂದಿನ ದಿನ, ತಾಯಿ ಯಾವುದೋ ಕಾರಣಕ್ಕೆ ಕೇಳಿದ್ದಳು.

"ಮದುವೆಗೆ ಮುಂಚೆ ಏನುಕೊಟ್ಟರೂ, ಇಷ್ಟು ಬೇಡ, ಅಷ್ಟು ಬೇಡ ಅಂತ ತಕರಾರು ಮಾಡ್ತಿದ್ದೆ. ಈಗ ಪರವಾಗಿಲ್ಲ ಎಲ್ಲಾ ತಿಂತೀಯ. ಮಾಡಿದ್ದಕ್ಕೂ ಸಾರ್ಥಕ"

"ಏನೋ ತಿನ್ನಬೇಕು ಅಂತ ಆಸೆಯಾಗುತ್ತೆ ತಿಂತೀನಿ. ಅಲ್ಲಿ ಇದೆಲ್ಲ ಎಲ್ಲಿ ಸುಲಭವಾಗಿ ಸಿಗುತ್ತೆ?"

"ಒಂದ್ಮಾತು ಕೇಳ್ತೀನಿ... ನಾಚಿಕೆ ಪಟ್ಟುಕೊಳ್ಳಬೇಡ. ಇದು ಬಯಕೆಯ ಲಕ್ಷಣವೇನೋ ಅಂತ ಅನ್ನಿಸ್ತು ಅದಕ್ಕೆ ಕೇಳಿದೆ."

"ಬಯಕೆ? ಹಾಗಂದ್ರೇನು!"

"ಮದುವೆಯಾಗಿದೆ ಅಷ್ಟೂ ತಿಳಿಯಲ್ವೆ!"

"ಇಲ್ಲ. ಅಂತಹ ಒಂದು ಪದ ಇದೆ ಅಂತಲೇ ನನಗೆ ಗೊತ್ತಿರಲಿಲ್ಲ"

"ಹೋಗಲಿ ಬಿಡು. ನಿನಗೆ ಏನೇನು ಆಸೆ ಆಗುತ್ತೋ ಅದನ್ನೆಲ್ಲ ತಿಳಿಸು. ಎಲ್ಲಾ ಮಾಡಿಕೊಡ್ತೀನಿ"

"ಏನಮ್ಮ ಹೆಚ್ಚುಗಾರಿಕೆ"

"ಹೆಚ್ಚುಗಾರಿಕೇನೇ.... ನಿನ್ನ ಅತ್ತೆಗೆ ಅನುಮಾನ ಬರಲಿಲ್ವೆ!"

"ಏನಂತ"

"ನೀನು ಗರ್ಭಿಣಿ ಇರಬಹುದು"

"ಥೂ ಹೋಗಮ್ಮ.... " ಮಾಲತಿ ನಾಚಿದರೂ ಆಕೆ ಬಿಡಲಿಲ್ಲ.

"ನಾಚಿಕೆ ಏಕೆ! ಮದುವೆ ಆದಮೇಲೆ ಸಹಜವೇ. ಹುಶಾರಿಲ್ಲ. ರೆಸ್ಟ್‌ಗೆ ಅಂತ ಬರ್ತೀದೀನಿ ಅಂತ ಬರೆದಿದ್ದೆಯಲ್ಲ. ನನಗೆ ಆಗಲೇ ಅನುಮಾನ ಬಂದಿತ್ತು. ಇದುವರೆಗೂ ನೀನಾಗಿಯೇ ಏನನ್ನೂ ಹೇಳಲಿಲ್ಲ. ಈಗೇನೀಗ? ಇದು ನಿನ್ನ ತಾಯಿಯ ಮನೆ. ಸಂಕೋಚ ಪಟ್ಟುಕೊಳ್ಳದೇ ಏನು ಬೇಕೋ ಕೇಳು. ಬಯಕೆಯನ್ನು ಅದುಮಿಟ್ಟುಕೊಳ್ಳಬಾರದು. ಅದು ಹುಟ್ಟುವ ಮಗುವಿಗೆ ಒಳ್ಳೆಯದಲ್ಲ"

"ಏನೇನೋ ಹೇಳಿ ತಲೆ ಕೆಡಿಸ್ತೀಯ. ಮದುವೆಯಾಗಿ ನಾಲ್ಕು ತಿಂಗಳು ಕಳೆದಿಲ್ಲ. ಹಾಗೆಲ್ಲಾ ಏನಿಲ್ಲ. ನನಗೆ ಗೊತ್ತು."

"ನಿನಗೆ ಅನುಭವ ಸಾಲದು. ಅನುಭವದ ಕಣ್ಣಿಗೆ ಎಲ್ಲಾ ತಿಳಿಯುತ್ತೆ"

"ಸರಿ. ನನ್ನ ಮಾತಿನ ಮೇಲೆ ನಂಬಿಕೆ ಇಲ್ಲದಿದ್ದರೆ ಹಾಗೇ ತಿಳಕೋ. ನನಗೇನು ನಷ್ಟ? ನೀನು ಕಷ್ಟಪಟ್ಟು ಮಾಡಿಕೊಟ್ಟಿದ್ದನ್ನು ನಾನು ಬಕಾಸುರಿಯಂತೆ ತಿಂದು ಮುಗಿಸ್ತೀನಿ" ಎಂದಿದ್ದಳು.

ಆ ಕ್ಷಣದಲ್ಲಿ ತಾಯಿ ಹೇಳಿದ ಬಯಕೆ ಎನ್ನುವ ಪದ ನೆನಪಿಗೆ ಬಂತು. ಬಯಕೆ, ಬಯಕೇನೇ, ಯಾವುದಾದರೇನು! ನೋಟ, ನುಡಿ, ಉಡುಗೆ ತೊಡುಗೆ ಎಲ್ಲಾ ಯಾವುದೇ ಬಯಸಿರೂ ಅದು ಬಯಕೆ ಎಂಬ ವಿಷಯ ಜ್ಞಾನಿಗೆ ಹೊಳೆದಂತೆ ಹೊಳೆಯಿತು.

"ಅಮ್ಮ ನಿನ್ನ ಕೆಂಪು ಅಂಚಿನ ಬಿಳಿ ಸೀರೇನ ನನಗೆ ಕೊಡ್ತೀಯಾ? ನನಗೆ ಇಷ್ಟ" ಎಂದಳು. ಅದನ್ನು ತಾಯಿ ತೆಗೆದುಕೊಟ್ಟು.

"ಬೇಕಾದರೆ ಇದನ್ನು ನೀನೇ ಇಟ್ಟುಕೋ. ಈ ವಯಸ್ಸಲ್ಲಿ ನನಗೆ ಬಿಳಿ ಸೀರೆ ಒಪ್ಪುಲ್ಲ. ನಿನ್ನ ಸೋದರ ಮಾವನಿಗೆ ತಿಳಿಯುವುದು ಇಷ್ಟು ಚೆನ್ನ" ಎಂದು ಅಣ್ಣನ ಉಡುಗೊರೆಯನ್ನು ಹಂಗಿಸಿದಳು.

ಮಾಲತಿ ಆ ಸೀರೆಯನ್ನು ಉಟ್ಟು ನಲಿದು, ತಾಯಿಯನ್ನು ಪ್ರಸನ್ನಗೊಳಿಸಿದಳು.

"ನಿನ್ನ ಹತ್ತಿರವಿದೆಯಲ್ಲ ಮುತ್ತಿನ ಓಲೆ, ಅದನ್ನು ಕೊಟ್ಟಿರ್ತೀಯಾ, ಒಂದು ನಾಲ್ಕು ದಿನ ಹಾಕಿಕೊಂಡಿರ್ತೀನಿ"

"ಧಾರಾಳವಾಗಿ ತಗೋ, ತಾಯಿ. ಆದರೆ ಆಗೆಲ್ಲಾ ಮುತ್ತಿನ ಓಲೆ ಎಂದರೆ ಮೂಗು ಮುರೀತಿದ್ದೆಯಲ್ಲೇ, ಈಗ ಅದರ ಮೇಲೆ ಆಸೆ ಹೇಗೆ ಬಂತು?"

"ಏನೋ ಆಸೆ ಆಯಿತು. ನಾನೂ ಬದಲಾಗ್ತಾ ಇದೀನಿ ಅಂತ ಕಾಣಿಸುತ್ತೆ."

ಎನ್ನುತ್ತಾ ಓಲೆಯನ್ನು ಹಾಕಿಕೊಂಡು ಕನ್ನಡಿಯ ಮುಂದೆ ನಿಂತು, ಅತ್ತಿತ್ತ ಮುಖವನ್ನು ತಿರುಗಿಸಿ ನೋಡಿಕೊಂಡಳು. ತನ್ನ ಹಿಂದೆ ನಿಂತು ತಾಯಿ ನೋಡಿದ್ದನ್ನು ಕನ್ನಡಿಯೊಳಗಿನಿಂದಲೇ ಗಮನಿಸಿದ್ದಳು. ತಿಳಿನಗೆ ತೇಲಿತ್ತು.

ತಾಯಿಯ ಜತೆಯಲ್ಲಿ ಯಾವುದೋ ಪಿಕ್ಚರಿಗೆ ಹೋಗಿಬಂದಳು. ತಲೆನೋವು ಪ್ರಾರಂಭವಾಗಿತ್ತು. ಪಿಕ್ಚರ್ರು ಎಂದರೆ ನಿನಗೆ ಅಷ್ಟಕ್ಕಷ್ಟೇ, ಹಾಗಿದ್ದರೂ ಏಕೆ ಹೋಗಬೇಕಾಗಿತ್ತು! ತಾಯಿ ಕೇಳಿದಾಗ ನುಡಿದಳು.

"ಕಲ್ಕತ್ತಾಕ್ಕೆ ಹೋದಮೇಲೆ ಕನ್ನಡ ಎನ್ನುವ ಪದವೇ ಅಪರೂಪವಾಗಿ

ಹೋಗಿದೆ. ಈಗ ಅದರ ಬೆಲೆ ಗೊತ್ತಾಗಿದೆ. ತಾಯಿಗೆ ತಿಳಿಯದಂತೆ ಎರಡು ಸಾರಿಡಾನ್ ನುಂಗಿ ಮಲಗಿದಳು."

ತಲೆನೋವು ಹೆಚ್ಚಾಗಿ ತಿಂದಿದ್ದೆಲ್ಲಾ ವಾಂತಿಯಾದಾಗ, ತಾಯಿ ತನ್ನ ಅನುಮಾನವನ್ನು ದೃಢಪಡಿಸಿದಳು.

"ಉದಾಸೀನ ಮಾಡಬೇಡ. ನಾಳೆನೇ ಲೇಡಿ ಡಾಕ್ಟರರ ಹತ್ತಿರ ಹೋಗಿಬರೋಣ"

ಮಾಲತಿ ನಕ್ಕಳು. ತಾಯಿಗೆ ಭ್ರಮೆ ಎಂದುಕೊಂಡಳು.

"ಹಾಗೇ ಬರುವಾಗ ನಿನ್ನ ಅತ್ತೆ ಮನೆಗೂ ಹೋಗಿಬರೋಣ. ಅವರಿಗೂ ಸಂತೋಷವಾಗುತ್ತೆ. ಮೊಮ್ಮಗನನ್ನು ಕಾಣುವ ಆಸೆ ಇರುಲ್ವೆ!"

"ಹಾಗಾದರೆ, ಅತ್ತೆಯ ಆಸೆಗಾಗಿ ತಾನೀಗ ಬಸಿರಿ ಎಂದು ಒಪ್ಪಿಕೊಳ್ಳಬೇಕು" ಎಂದುಕೊಂಡು,

"ಸರಿ. ಒಂದು ವೇಳೆ ಡಾಕ್ಟರು, ನಿನ್ನ ಮಾತನ್ನೇ ಋಜುವಾತು ಮಾಡಿದರೆ, ನನಗೇನು ಕೊಡ್ತೀಯಾ?"ಸವಾಲಿನಂತೆ ಕೇಳಿದಳು.

"ನೀನು ಕೇಳಿದ್ದು......"

"ಖಂಡಿತವಾಗಿಯೂ.....?"

"ಖಂಡಿತವಾಗಿಯೂ ನನ್ನ ಕೈಲಿ ಏನು ಆಗುತ್ತೋ ಅದನ್ನು ಧಾರಾಳವಾಗಿ ನಡೆಸಿಕೊಡ್ತೀನಿ. ಮೊದಲು ದೇವರ ಮುಂದೆ ತುಪ್ಪದ ದೀಪ ಹಚ್ಚಿಬರ್ತೀನಿ" ಆಕೆ ಕೈಕಾಲು ತೊಳೆಯಲು ಬಚ್ಚಲ ಮನೆ ಕಡೆ ನಡೆದಾಗ, "ದೇವರೇ ನನ್ನ ತಪ್ಪೇನಿದ್ದರೂ ಕ್ಷಮಿಸಪ್ಪಾ..... ನನ್ನ ಮನಸ್ಸಲ್ಲಿ ಏನಿದೆ ಅಂತ ನಿನಗೆ ಮಾತ್ರ ಅರ್ಥವಾಗ್ತಿದೆ ಅಲ್ಲವೆ?" ಎಂದುಕೊಂಡು ಮಾಲತಿ ಮತ್ತೆ ಮಲಗಿದಳು.

ತಾಯಿ ಒಳಗಿನಿಂದ ಪ್ರಸಾದದ ಕುಂಕುಮ ತಂದು ಅವಳ ಹಣೆಗಿಟ್ಟಳು.

"ಇನ್ನು ಮೇಲೆ ಸಿನಿಮಾ, ಅದು ಇದು ಅಂತ ಬಿಸಿಲ್ನಲ್ಲಿ ಅಲೆಯಬೇಡ. ಗಳಿಗೆಗಳು ಒಂದೇ ಸಮ ಇರುವುದಿಲ್ಲ. ಏನಾದರೂ ಹೆಚ್ಚುಕಡಿಮೆ ಆದರೆ, ನಿನ್ನ ಅತ್ತೆ ಮನೆಯವರಿಗೆ ಏನು ಉತ್ತರ ಹೇಳುವುದು!"

"ಏನಾಗುಲ್ಲ ಬಿಡಮ್ಮ.... ನನಗೆ ಬೇಜಾರಾದ್ರೆ ಹೇಗೆ ಕಾಲ ಕಳೆಯಲಿ!"

"ನಿನ್ನ ಸ್ನೇಹಿತೆಗೆ, ದಿನಾ ಬಂದು ಕೂತಿರುವಂತೆ ನೀನೇ ಹೇಳು"

"ಚೆನ್ನಾಗಿದೆ. ಅವಳಿಗೆ ಬೇರೆ ಏನೂ ಕೆಲಸವೇ ಇಲ್ಲವೆ?"

"ಒಂದಿಷ್ಟು ದಿನ ಬಂದು ನಿನ್ನ ಎದುರಿಗೆ ಕೂತಿದ್ದರೆ ಅವಳ ಅಜ್ಜಿ ಗಂಟೇನೂ ಹೋಗುವುದಿಲ್ಲ."

"ಹೀಗೆ ಮಾತನಾಡಿದರೆ, ನಾನು ಅವಳನ್ನು ಕರೆಯುವುದೇ ಇಲ್ಲ"

"ಸರಿ. ನಿಮ್ಮಿಬ್ಬರಿಗೂ ಅವಳ ಮೆಲೆ ಅತಿ ವ್ಯಾಮೋಹ."

"ಹೌದು. ನಮಗೆ ಅವಳನ್ನು ಕಂಡರೆ ಇಷ್ಟ. ನಿನಗೇಕೆ ಅಸಮಾಧಾನವೋ ನನಗೆ ತಿಳಿಯದು. ಅವಳೇನು ಅನ್ಯಾಯ ಮಾಡಿದ್ದಾಳೆ ನಿನಗೆ!"

"ಅವಳು ಯಾರು ನನಗೆ ಅನ್ಯಾಯ ಮಾಡಕ್ಕೆ? ಹಾಗೆಲ್ಲಾ ಏನಿಲ್ಲ. ನಿಮ್ಮಗಳ ಅತಿರೇಕ ನೋಡಿದರೆ ನನಗೆ ಅಸಹ್ಯವಾಗುತ್ತೆ ಅಷ್ಟೆ"

"ಪಾಪ ಅವಳನ್ನು ನೋಡಿದರೆ ನನಗೆ ಅಯ್ಯೋ ಅಂತ ಅನ್ನಿಸುತ್ತೆ. ನಾನು ಹೇಳಿದ ಹಾಗೆ ಕೇಳ್ತಾಳೆ. ಅವಳಿಗೆ ಸಹನೆ ತುಂಬಾ ಜಾಸ್ತಿ. ಯಾರು ಏನೇ ಅಂದರೂ, ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೇ ಅವರನ್ನು ಕ್ಷಮಿಸಿಬಿಡ್ತಾಳೆ."

"ಸರಿ. ಅವಳನ್ನು ನನ್ನ ಎದುರಿಗೆ ಹೊಗಳಬೇಡ"

"ಯಾಕಮ್ಮ.... ಹೊಗಳಬಾರದು! ನನಗೆ ಇಷ್ಟ ಅವಳನ್ನು ಹೊಗಳಕ್ಕೆ. ನಿನಗಿಷ್ಟವಿಲ್ಲದಿದ್ದರೆ ನೀನು ಒಳಗೆ ಹೋಗು"

ಭವಾನಮ್ಮ ಉತ್ತರಿಸದೇ ಒಳಗೆ ಹೋದಾಗ ಮಾಲತಿ ನಕ್ಕಳು.

"ಯಾಕೇ ಮಲಗಿದೀಯಾ" ಮೋಹನ ಒಳಗೆ ಬರುತ್ತಲೇ ಕೇಳಿದ.

"ಯಾಕೋ ಬೇಜಾರು. ಸಮಯವೇ ಹೋಗ್ತಿಲ್ಲ"

"ನಿನ್ನ ಸ್ನೇಹಿತೆ ಬರಲಿಲ್ವಾ!"

"ಹೋಗಿ ಕರೆದುಕೊಂಡು ಬರ್ತೀಯಾ"

"ಬಾ. ಬೇಕಾದರೆ ನಿನ್ನನ್ನೇ ಅವಳ ಮನೆಗೆ ಬಿಡ್ತೀನಿ"

"ನನಗೆ ಅಲ್ಲಾಡಕೂಡದು ಅಂತ ಅಮ್ಮ ನಿಬಂಧನೆ ಹಾಕಿದ್ದಾಳೆ"

"ಯಾಕಂತೆ?"

"ಏನೋ ನಂಗೆ ಗೊತ್ತಿಲ್ಲ. ಒಂದು ದಿನವಾದರೂ, ಅವಳು ಹೇಳಿದಂತೆ ಕೇಳಿ ಅವಳ ಮನಸ್ಸನ್ನು ಸಂತೋಷಪಡಿಸೋಣ ಅಂತ ಮಲಗಿದೀನಿ"

"ಇದರಿಂದ ನಿನಗೆ ಸಿಗುವುದಾದರೂ ಏನು!" ಸೊಟ್ಟಗೆ ನಕ್ಕ.

"ನೋಡ್ತಿರು..... ಸದ್ಯದಲ್ಲೇ ನಿನಗೇ ತಿಳಿಯುತ್ತೆ."

"ಮೋನ, ಕಾಫಿ ತಿಂಡಿ ತಗಳೋ" ತಾಯಿ ಕೂಗಿದಾಗ, ಮಾಲತಿಯೂ ಎದ್ದು ಬಂದಳು.

"ಅಮ್ಮ ನನಗೂ ಏನಾದ್ರೂ ಕೊಡು"

"ಅದೇನೇ ಇಷ್ಟು ಹೊತ್ನಲ್ಲಿ ತಿಂತೀಯ. ಮುಂಚೆಯಲ್ಲಾ ಸಂಜೆ ಹೊತ್ನಲ್ಲಿ ತಿಂಡಿ ತಿಂದರೆ, ಅಲಸ್ಯವಾಗುತ್ತೆ. ಮೈ ಭಾರವಾಗುತ್ತೆ. ಅದೂ ಇದೂ

ಅಂತಿದ್ದೆ.”

“ಈಗ ಅದನ್ನು ಬಿಟ್ಟು ಬೇರೆ ಕೆಲಸವೇ ಇಲ್ಲವಲ್ಲ”

“ತಿನ್ನಮ್ಮ ತಿನ್ನು. ಧಾರಾಳವಾಗಿ ತಿನ್ನು. ಮೈ ಊದಿಕೊಳ್ಳುತ್ತೆ ಅಷ್ಟೆ.”

“ಥೂ ಬಿಡ್ತು ಅನ್ನು. ನೀನು ಕಣ್ಣು ಹಾಕಬೇಡ. ನೀನು ಒಳಗೆ ಹೋಗಿ ತಿನ್ನು. ಅವನು ಏನಾದರೂ ಅಂತಾನೆ ಇರ್ತಾನೆ” ಮೋಹನ ಪೆಚ್ಚಾದ.

“ಇದೇನಮ್ಮ ನೀನು ರಿವರ್ಸ್ ಆಗಿಬಿಟ್ಟಿದೀಯಾ.... ನನ್ನನ್ನು ಇವಳು ಅಂದಾಗೆಲ್ಲ ಸುಮ್ಮನಿರುತ್ತಿದ್ದೆ! ಅವಳ ಮಾತಿಗೆ ಬೆಂಬಲ ಕೊಡ್ತಿದ್ದೆ”

ಮಾಲತಿ, ಅವರಿಬ್ಬರ ಮಾತಿಗೆ ಗಮನ ಕೊಡದೇ ಗಬಗಬನೆ ತಿಂದು ನೀರು ಕುಡಿದು, ಕಾಫಿಯ ಲೋಟವನ್ನು ಬರಿದು ಮಾಡಿಟ್ಟಾಗ, ಅವನು ಸುಸ್ತು. ಆಕೆ ಸಂತೃಪ್ತಿಯಿಂದ ಒಳಗೆ ನಡೆದಳು. ಮಾಲತಿ ನಗುತ್ತಾ ಎದ್ದು ಹೋಗಿ, ಎಲ್ಲವನ್ನು ಕಕ್ಕಿದ್ದಳು.

ಆ ರಾತ್ರಿ ಅವಳಿಗೆ ಸಣ್ಣಗೆ ಜ್ವರವೂ ಬಂತು. ರಾತ್ರಿಯೆಲ್ಲಾ ಭವಾನಮ್ಮನಿಗೆ ಜಾಗರಣೆ. “ತಿಂದಿದ್ದು ಹೆಚ್ಚಾಯಿತು. ಅಜೀರ್ಣವಾಗಿದೆ. ಅದಕ್ಕೇ ಜ್ವರ ಬಂದಿದೆ.” ಎಂದು ಮೋಹನನ ವಾದ.

“ನಿನಗೆ ತಿಳೀದು ಸುಮ್ಮನಿರು” ಆಕೆ ಗದರಿದ್ದಳು.

ತಂದೆಯೂ ಬಂದು ನೋಡಿ ಹೇಳಿದ್ರು.

“ಸುಮ್ಮನೇ ನೀನೂ ಮಾಡಿ ಮಾಡಿ ತಿನ್ನಿಸ್ತಿದೀಯಾ. ಇನ್ನೇನಾಗುತ್ತೆ. ಒಂದು ರಾತ್ರಿ ಉಪವಾಸವಿದ್ದರೆ ಎಲ್ಲಾ ಸರಿಹೋಗುತ್ತಿತ್ತು.” ತಾಯಿ ಆ ಮಾತಿಗೆ ಉತ್ತರಿಸದೇ ತನ್ನ ಪಾಡಿಗೆ ತಾನು ಹೋಗಿದ್ದಳು. ಮತ್ತು ಒಂದೆರಡು ಸಲು ವಾಂತಿಯಾದಾಗ ಮಾಲತಿಗೂ ಗಾಭರಿಯಾಗಿತ್ತು.

ಬೆಳಿಗ್ಗೆ ಸ್ವಲ್ಪ ನಿದ್ದೆ ಬಂದಿದ್ದ ಮಂಪರಿನಲ್ಲಿ ಏನೇನೋ ಅಸ್ಪಷ್ಟವಾಗಿ ಕನವರಿಸಿದ್ದಳು. ಜ್ವರ ಬಿಟ್ಟಿರಲಿಲ್ಲ.

“ನಿನ್ನ ಗಂಡನಿಗೆ ಟ್ರಂಕ್‌ಕಾಲ್ ಮಾಡ್ಲೇನೇ?” ಮೋಹನ ಕೇಳಿದ್ದ.

“ಏನೂ ಬೇಡ. ಸ್ವಲ್ಪ ಸುಸ್ತು ಅಷ್ಟೇ. ಡಾಕ್ಟರ ಹತ್ತಿರ ಹೋಗಿಬರ್ತೀನಿ”

ಮೋಹನ ತನ್ನ ಪಾಡಿಗೆ ತಾನು ಕೆಲಸಕ್ಕೆ ಹೊರಟುಹೋದ. ಮಾಲತಿಗೆ ಸಿದ್ದವಾಗಲು ಸಹಾಯ ಮಾಡಿ, ಹೊರಡಿಸಿದಳು ಭವಾನಮ್ಮ.ಏಳುವಾಗ ಅವಳಿಗೆ ಸ್ವಲ್ಪ ತಲೆ ತಿರುಗಿದಂತಾಯ್ತು. ವಾಲಿದವಳನ್ನು ತಾಯಿಯೇ ಹಿಡಿದು ನಿಲ್ಲಿಸಿದಳು. ತಂದೆ ಒಂದು ಆಟೋ ತಂದುಕೊಟ್ಟರು ಹತ್ತಿರದ ಡಾಕ್ಟರ ಬಳಿಗೆ ಹೋದರು.

"ಡಾಕ್ಟರು ಸರಿಯಾಗಿ ಪರೀಕ್ಷಿಸಿ, ಒಂದು ದಿನದ ಮಟ್ಟಿಗೆ, ನರ್ಸಿಂಗ್ ಹೋಂಗೆ ಅಡ್ಮಿಟ್ ಆಗಿ. ಡ್ರಿಪ್ಸ್ ಕೊಟ್ಟರೆ ಬೇಗ ಶಕ್ತಿ ಬರುತ್ತೆ" ಎಂದರು.

ಭವಾನಮ್ಮ ನಡುಗಿಹೋದಳು.

"ಏನಾಯ್ತಪ್ಪಾ ಇವಳಿಗೆ, ಡಾಕ್ಟರು ಅಡ್ಮಿಟ್ ಆಗ್ಲಿ ಅನ್ನುತ್ತಿದ್ದಾರಲ್ಲ." ಎಂದು ಕೊಂಡು, ಮನದಲ್ಲೇ ದೇವರಿಗೆ ವಂದಿಸಿ, ಕಾಣಿಕೆ ಕಳಿಸುವುದಾಗಿ ಹರಕೆ ಹೊತ್ತಳು.

ಮಾಲತಿ, ಡಾಕ್ಟರರನ್ನು ಕೇಳಿ, ಅಲ್ಲಿಂದಲೇ ಮೋಹನನಿಗೆ ಫೋನು ಮಾಡಿ ವಿಷಯ ತಿಳಿಸಿದಳು. "ಹಾಗೇ ಬರುವಾಗ ಮಧುರನನ್ನು ಕರೆದುಕೊಂಡು ಬಾ" ಒತ್ತಿ ಹೇಳಿದಳು.

"ಅವಳ್ಯಾಕೆ ಈಗ ಅಂತೀನಿ" ತಾಯಿ ಆಕ್ಷೇಪಿಸಿದಳು.

"ಮಾತನಾಡಕ್ಕೆ ನನ್ನ ಜೊತೆಗೆ ಯಾರಾದ್ರೂ ಬೇಡವೇನಮ್ಮ" ಇವಳೂ ರೇಗಿದಾಗ ಆಕೆ ಸುಮ್ಮನಾದಳು.

ಗಾಭರಿಗೊಂಡಿದ್ದ ಮೋಹನ ಸೀದಾ ಮಧುರಳ ಮನೆಗೆ ಬಂದ. ವಿಷಯ ತಿಳಿಸಿದ. ಮಧುರಾ ಹೋಗಿದ್ದವಳು ಹಾಗೇ ತಕ್ಷಣವೇ ಹೊರಟುಬಿಟ್ಟಳು. ಸೀದಾ ಇಬ್ಬರೂ ಕ್ಲಿನಿಕ್‌ಗೆ ಬಂದರು. ಪಕ್ಕದಲ್ಲೇ ನರ್ಸಿಂಗ್ ಹೋಂ. ಅವಳನ್ನು ಅಡ್ಮಿಟ್ ಮಾಡಿಯಾಗಿತ್ತು. ಮಾಲತಿ ಗೆಲುವಾಗಿದ್ದರೂ ಎಲ್ಲರಿಗೂ ದಿಗಿಲು.

"ಅಪ್ಪನ್ನ ಕರೆದುಕೊಂಡು ಬರಲೇನೇ?" ಕೇಳಿದ್ದ.

"ಏನೂ ಬೇಡ. ಅಮ್ಮನ್ನ ಕರೆದುಕೊಂಡು ನೀನು ಹೋಗು. ಇಲ್ಲಿ ಮಧುರ ನನ್ನ ಜತೆಗಿರ್ತಾಳೆ."

ತಾಯಿ ಮನಸ್ಸಿಲ್ಲದ ಮನಸ್ಸಿನಲ್ಲಿ ಮನೆಗೆ ಹೊರಟಳು. "ಏನಾದ್ರೂ ತಿನ್ನಕ್ಕೆ ಅಂತ ತರಲೇನೇ?" ತಾಯಿ ಕೇಳಿದಾಗ, ಮೋಹನ ನಕ್ಕಿದ್ದ.

"ತಿಂದೂ ತಿಂದೂ ಹೀಗಾಗಿದೆ. ಅಲ್ಲದೆ ಡ್ರಿಪ್ಸ್ ಕೊಟ್ಟಿರುವಾಗ ಏನನ್ನೂ ತಿನ್ನಬಾರದು"

ತಂದೆ ಬಂದು ಮಾತನಾಡಿಸಿಕೊಂಡು ಹೋಗಿದ್ದರು. ಹಾಗೇ ಡಾಕ್ಟರನ್ನು ಮಾತನಾಡಿಸಿ,"ಏನೂ ಗಾಭರಿಇಲ್ಲ ತಾನೇ.... ಅವಳ ಗಂಡ ಬೇರೆ ಊರಿನಲ್ಲಿದ್ದಾನೆ. ಅವಳ ಅತ್ತೆ ಮಾವನಿಗೂ ವಿಷಯ ತಿಳಿಸಿಲ್ಲ." ಎಂದು ಕೇಳಿದ್ದರು.

"ಏನೂ ಗಾಭರಿ ಇಲ್ಲ ನೆನ್ನೆ ರಾತ್ರೀನೇ ತಕ್ಷಣ ಸೇರಿಸಿದ್ದರೆ ಚೆನ್ನಾಗಿತ್ತು.

ಇಷ್ಟು ಸುಸ್ತಾಗುತ್ತ ಇರಲಿಲ್ಲ. ಇನ್ನೇನಿಲ್ಲ. ಡಿಹೈಡ್ರೇಷನ್ ಆದರೆ ಹುಟ್ಟುವ ಮಗುವಿನ ಮೇಲೆ ಪರಿಣಾಮ ಬೀಳುತ್ತೆ ಅಷ್ಟೇ."

"ಅಂದರೇ.... ನಮ್ಮ ಮಗಳು ಗರ್ಭಿಣೀನೇ?"

"ಹು, ಹೌದು ಎಲ್ಲಾ ರೀತಿಯಲ್ಲೂ ಆರೋಗ್ಯವಾಗಿದ್ದಾರೆ. ಆದರೂ ಈ ರಾತ್ರಿ ಇಲ್ಲಿರಲಿ, ಬೇಗ ಚೇತರಿಸಿಕೊಳ್ಳದಿದ್ದರೆ, ಸ್ವಲ್ಪ ಕಷ್ಟ..... ಇವರಿಗಲ್ಲ. ಮಗುವಿಗೆ, ಆಗ ನಾವು ನಿಮ್ಮ ಒಪ್ಪಿಗೆ ತಗೊಂಡು ಔಷಧಿ ಕೊಟ್ಟು.... ಏನೂ ಉಳಿಯದಂತೆ ಮಾಡಬೇಕಾಗುತ್ತದೆ"

"ಹಾಗೆ ಮಾಡಬೇಡಿ ಡಾಕ್ಟರೇ.... ಹಾಗಾಗದಂತೆ ನೋಡಿಕೊಳ್ಳಿ"

"ಹಾಗೇನೂ ಆಗುವಂತೆ ಕಾಣುಲ್ಲ. ಆದರೂ ತಿಳಿದಿರಲಿ ಅಂತ ನಿಮಗೆ ಹೇಳಿದ್ದೆ ಅಷ್ಟೇ.... ಯಾಕೆ ಅಂದ್ರೆ ಒಂದು ರಾತ್ರಿಯಲ್ಲಿ ಏನೇನು ಬದಲಾವಣೆ ಆದರೂ ಆಗುತ್ತೆ ಅಲ್ಲವೆ!"

ಡಾಕ್ಟರಮ್ಮ ಎಷ್ಟು ಕಹಿಯಾಗಿ ಮಾತನಾಡುತ್ತಿದ್ದಾಳೆ ಎಂದುಕೊಂಡರು.

"ಏಕೋ ಏನೋ ಮನಸ್ಸಿಗೆ ಬೇಸರ ಹೆಚ್ಚಾಯಿತು. ಹೆಂಡತಿಯೊಡನೆ ಡಾಕ್ಟರು ಹೇಳಿದ್ದನ್ನೆಲ್ಲ ಹೇಳಿ, ಈಗ ದೇವರೇ ಗತಿ" ಎಂದರು ಮೇಲೆ ನೋಡುತ್ತಾ.

"ನೀವೇನೂ ಹೆದರಬೇಡಿ. ಏನೂ ಆಗುಲ್ಲ. ನಾನು ದೇವರಿಗೆ ಕಾಣಿಕೆ ಎತ್ತಿಟ್ಟಿದೀನಿ. ಅವನು ಕಾಪಾಡುತ್ತಾನೆ" ಭವಾನಮ್ಮನೇ ಧೈರ್ಯದಿಂದ ನುಡಿದಾಗ ಆತನಿಗೆ ಸ್ವಲ್ಪ ಹಗುರವೆನಿಸಿತು. ಆದರೂ "ಬೀಗರಾಗಲೀ, ಅಳಿಯನಾಗಲೀ ಆಕ್ಷೇಪಿಸುವಂತಾಗಬಾರದು" ಅಂತ ಮತ್ತೆ ನುಡಿದರು.

ಮೋಹನ ಅಲ್ಲಿಯೇ ಇದ್ದವನು. ಅವರುಗಳಾಡಿದ ಮಾತುಗಳನ್ನು ಕೇಳಿಸಿಕೊಂಡಿದ್ದ. ಮಧುರಳ ತಂದೆ ಆಡಿದ್ದ ಮಾತುಗಳು ನೆನಪಾದವು. "ಆರೋಗ್ಯವಂತ ಮಗು ಹುಟ್ಟಲಿ" ಎಂದು ಹಾರೈಸಿದ.

ಆ ರಾತ್ರಿ, ಭವಾನಮ್ಮ ಮಗಳ ಜತೆಯಲ್ಲಿರಬೇಕಾಗಿತ್ತು. ಅವರು ಬರುವವರೆಗೂ ಮಧುರ ಅಲ್ಲಿಯೇ ಕುಳಿತಿದ್ದಳು.

"ಎಷ್ಟೊತ್ತಿಂದ ಕೂತಿದೀಯ. ನೀನಿನ್ನು ಹೊರಡಮ್ಮ. ಕತ್ತಲಾಗ್ತಾ ಬಂದಿದೆ. ಒಬ್ಬಳೇ ಹೋಗಬೇಡ. ಮೋಹನ ಬಿಡ್ತಾನೆ" ಎಂದರು.

ಮೋಹನ ಮಾಲತಿ ಮುಖ ಮುಖ ನೋಡಿಕೊಂಡರು. ಮಧುರಳ ಬಗೆಗ ಅಮ್ಮ ಆಡಿದ ಮೊದಲ ಮೃದುವಾದ ಮಾತುಗಳು. ತಾಯಿಗೆ ಅಷ್ಟು ಮೃದುತ್ವ ಬರಬೇಕಾದರೆ, ಎಷ್ಟು ಆತಂಕಗೊಂಡಿರಬೇಕು ಎಂದು

ಚಿಂತಿಸಿದ.

ಮಧುರನ್ನ ಅವಳ ಮನೆಯ ಹತ್ತಿರ ಇಳಿಸಿ, ಏನೋ ಒಂದು ತರಹದ ಭಾವುಕತೆಯಿಂದ ಅವಳ ಕೈ ಹಿಡಿದು, "ಥ್ಯಾಂಕ್ ಯೂ ವೆರಿಮಚ್" ಎಂದ.

ಅವಳು ಅವನನ್ನೇ ನೋಡಿ, "ಇದು ನನ್ನ ಡ್ಯೂಟಿ" ಎಂದಳು ಮೆಲ್ಲನೆ. ಮುಂದೆ ಅವನು ಏನಾದರೂ ಹೇಳುವ ಮೊದಲೇ ಅವಳು ಕೈ ಬಿಡಿಸಿಕೊಂಡು ಹೊರಟು ಹೋಗಿದ್ದಳು. ಅವಳ ಕೈಯ ಸ್ಪರ್ಶದ ಬಿಸಿ ಆರುವ ಮೆದಲೇ ಅವನು ಕೈಯನ್ನು ಕೆನ್ನೆಯ ಮೇಲೆ ಇಟ್ಟುಕೊಂಡ. ಮನಸ್ಸಿಗೆ ಹಿತವೆನಿಸಿತ್ತು. 'ಐ ಲವ್ ಯೂ ಮಧುರ' ಎಂದಿದ್ದ ಮೊಟ್ಟ ಮೊದಲ ಬಾರಿಗೆ. ಆದರೆ ಮಧುರ ಎದುರಿಗೆ ಇರಲಿಲ್ಲ. ಅವಳ ಹಿಂದೆಯೇ ಹೋಗಿ ಕರೆದು, ಹೇಳುವ ಮನಸ್ಸಾಯಿತು. ಆದರೆ ಅದು ಸಮಯವಲ್ಲವೆಂದುಕೊಂಡು ಹಾಗೇ ಹಿಂತಿರುಗಿದ.

ಅವನು ಕೈ ಹಿಡಿದಾಗ ಮಧುರ ನಡುಗಿ, ಬೆವತುಹೋಗಿದ್ದಳು. ಅವನೆಂದೂ ಆ ರೀತಿ ವರ್ತಿಸಿರಲಿಲ್ಲ. ಒಂದು ಗಳಿಗೆ ಅವಳಿಗೆ ಜಗತ್ತನ್ನೇ ಮರೆಯುವಷ್ಟು ಆನಂದವಾಗಿತ್ತು.

ಮಧ್ಯಾಹ್ನವೆಲ್ಲಾ ಮಾಲತಿ ಏನೇನೋ ಆಡಿದ್ದಳು.

"ನಿನ್ನ ಮನಸ್ನಲ್ಲಿ ಏನಿದೆ ಅಂತ ಹೇಳಬಾರದೇನೇ, ಅವನೂ ಅಷ್ಟೇ. ಒಬ್ಬರನ್ನೊಬ್ಬರು ಸತಾಯಿಸಿಕೊಂಡು ಕಾಲ ಕಳೀತಿದೀರಿ ಅಷ್ಟೇ. ನೀವೆಂತಹ ಪ್ರೇಮಿಗಳೋ?"

"ನಿನಗೆ ಹೇಗೆ ತಿಳೀತು ಇದೆಲ್ಲಾ?"

"ತಿಳೀದೇ ಏನು! ನೀನೇ ನನ್ನ ಅತ್ತಿಗೆ ಅಂತ ಸಹ ತೀರ್ಮಾನ ಮಾಡಿಬಿಟ್ಟದೀನಿ"

"ನನ್ನನ್ನು ಒಂದು ಮಾತು ಕೇಳದೇ?"

"ನಾನು ಕೇಳಿದರೆ ಇಲ್ಲ. ಎನ್ನುವಷ್ಟು ಧೈರ್ಯ ನಿನಗಿದೆಯೇ?"

"ಏನೋ ನನಗೆ ಗೊತ್ತಿಲ್ಲ. ಆದರೆ ನಿಮ್ಮಣ್ಣ ಏನಂತಾರೆ ಅಂತ ಎಂದಾದರೂ ಕೇಳಿ ತಿಳಿದುಕೊಂಡಿದೀಯಾ?"

"ಕಣೇ ಕೇಳು. ಏನಾದರೂ ಒಂದು ನೆವದಲ್ಲಿ, ಅವನ ಹಿಂದೆ ಕೂತು ಓಡಾಡಿದೀಯಲ್ಲ, ನಿನಗೆ ಅಷ್ಟೂ ಅರ್ಥವಾಗಬೇಡವೆ?"

"ನಾವೇನು ಮಜಾ ಮಾಡಕ್ಕೆ ಅಂತ ತಿರುಗಾಡಲಿಲ್ಲ. ಸಮಯದಲ್ಲಿ

ಸಹಾಯ ಮಾಡಿದ್ದಾರೆ ಅಷ್ಟೇ."

"ನಿನ್ನಂತಹ ಒಬ್ಬ ಸುಂದರ ಹುಡುಗಿಗೆ, ಪ್ರತಿಫಲದ ಆಸೆ ಇಲ್ಲದೇ ಯಾರೂ ಸಹಾಯ ಮಾಡಲ್ಲ"

"ಹಾಗಾದರೆ ಮೋಹನ ಅಷ್ಟು ಸ್ವಾರ್ಥಿ ಅನ್ನು"

"ಅವನ ಸ್ವಾರ್ಥತನದಿಂದ ನಿನಗೆಷ್ಟು ಲಾಭವಿದೆ ಗೊತ್ತಾ? ಅವನ ನೆಚ್ಚಿನ ಪ್ರೀತಿಯ ಮಡದಿಯಾಗುವವಳು ನೀನು. ಇನ್ಯಾರೂ ಅಲ್ಲ"

"ಆ ಕಾಲ ಬರಬಹುದು ಅಂತ ನನಗನ್ನಿಸುಲ್ಲ ಮಾಲತಿ. ನಿನಗೆ ಭ್ರಮೆ."

"ಭ್ರಮೆ ಏನಿಲ್ಲ. ಆಕಾಲ ಬಂದೇ ಬರುತ್ತೆ. ನೀನೊಂದು ತರಹ ಪೆಸಿಮಿಸ್ಟಿಕ್"

"ನಾನು ಪೆಸಿಮಿಸ್ಟಿಕ್ ಆದರೂ ಪರವಾಗಿಲ್ಲ. ಸುಮ್ಮನೇ ಮನಸ್ತಾಪವಾಗ ಬಾರದು."

"ಮನಸ್ತಾಪ ಏಕೆ ಬರುತ್ತೆ? ನಾನು ಈ ಸಲ ಊರಿಗೆ ಹೊರಡುವ ಮೊದಲು ನಿಮ್ಮಿಬ್ಬರ ಮದುವೆ ಮಾಡಿಸಿಯೇ ಹೊರಡ್ತೀನಿ"

"ಅದ್ಹೆಗೆ ಮಾಡ್ತೀಯೋ ನಾನಂತೂ ಕಾಣೆ. ನನ್ನ ತಂದೆ ತಾಯಿ, ನಿನ್ನ ತಂದೆ ತಾಯಿ ಒಪ್ಪಬೇಡವೇ!"

"ಯಾಕೆ ಒಪ್ಪುಲ್ಲ! ನಿಮ್ಮಪ್ಪ ಅಮ್ಮನಿಗೆ ಇವನಂತಹ ಅಳಿಯ ಬೇರೆಲ್ಲಿ ಸಿಕ್ತಾರೆ! ಹಾಗೇ ನಮ್ಮ ಮನೆಯಲ್ಲೂ ನೀನೇ ಈ ಮನೆಗೆ ಸರಿಯಾದ ಸೊಸೆ ಅಂತ ನಾನು, ಅಪ್ಪ ಮೋಹನ ತೀರ್ಮಾನಿಸಿಬಿಟ್ಟಿದ್ದೀವಿ. ನಾವು ಮೂರು ಜನ ಒಂದು ಕಡೆ ಆದಮೇಲೆ ಅಮ್ಮನೂ ಆ ಕಡೆಗೆ ವಾಲಬೇಕು."

"ಬಲವಂತವಾಗಿ ನಿಮ್ಮ ತಾಯಿ, ನನ್ನನ್ನು ಸೊಸೆ ಅಂತ ಒಪ್ಪಿಕೊಂಡರೆ, ಅದು ಸದಾ ನನ್ನನ್ನು ಕೊರೆಯುತ್ತೆ."

"ಹಾಗಾದ್ರೆ ಹೀಗೇ ಜೀವಮಾನವೆಲ್ಲಾ ಕೊರಗ್ತೀಯಾ! ಏಕಾಂಗಿಯಾಗಿ! ಅಥವಾ ಬೇರೆ ಯಾವನನ್ನಾದರೂ ಮದುವೆಯಾಗಿ, ಅಲ್ಲೂ ಕೊರಗ್ತೀಯೋ, ಇವನನ್ನು ಮರೆಯಲಾಗದೇ"

ಅವಳ ಮಾತಿಗೆ ನಗಬೇಕೆನಿಸಿತ್ತು.

"ವಿಪರೀತ ಮಾತನ್ನಾಡ್ತಿದ್ದೀಯ. ಸುಸ್ತು ಹೆಚ್ಚಾಗುತ್ತೆ. ಮಲಕ್ಕೋ. ನಿಮ್ಮ ತಾಯಿಗೆ ಗೊತ್ತಾದ್ರೆ ಇಬ್ಬರನ್ನು ಬೈತಾರೆ"

"ಇಲ್ಲ ನನಗೀಗ ತುಂಬಾ ತುಂಬಾ ರಿಯಾಯಿತಿ. ಖಂಡಿತಾ ಬೈಯಲ್ಲ.

ಏಕೆ ಗೊತ್ತಾ, ಮೊದಲನೆಯದಾಗಿ, ನಾನು ಹುಶಾರಿಲ್ಲದೇ ಮಲಗಿದೀನಿ. ಎರಡನೇದಾಗಿ, ನಾನು ಮದುವೆಯಾಗಿರುವ ಮಗಳು, ಮೂರನೆಯದಾಗಿ.... ನಿಧಾನವಾಗಿ ಹೇಳ್ತೀನಿ" ಎಂದಳು.

ಮಧುರ ಅರ್ಥವಾದವಳಂತೆ ನಕ್ಕಿದ್ದಳು. ಮಾಲತಿ ನಿದ್ದೆ ಹೋಗ್ದಿಳು.

ತಾನು ಮೋಹನನನ್ನು ಮರೆತು ಬಾಳಲು ಸಾಧ್ಯವೆ! ಆದರೆ ತಾನಾಗಿಯೇ ತಂದೆಗಾಗಲೀ, ತಾಯಿಗಾಗಲೀ ಹೇಗೆ ಹೇಳುವುದು! ಅವರಿಗೇ ಅರ್ಥವಾಗಬೇಕವೆ! ನನ್ನ ಮೇಲೆ ವಿಪರೀತ ನಂಬಿಕೆ. ಅನುಮಾನವೂ ಬಂದಿರಲಾರದು. ಆದರೆ ತಂದೆ ತಾಯಿಗಳಾಗಿ ಸುಮ್ಮನಿರಲು ಸಾಧ್ಯವೆ! ಮಕ್ಕಳ ಬಗ್ಗೆ ಯಾವ ಭಾವನೆಗಳೂ ಇಲ್ಲವೆ! ಇನ್ನೂ ನಾಲ್ಲು ವರ್ಷ ಕಳೆದರೆ ರಾಗಿಣಿಯೂ ಮದುವೆಗೆ ಸಿದ್ಧವಾಗುತ್ತಾಳೆ. ಅವಳು ತಾನಾಗಿಯೇ ತನ್ನ ಆಸೆಯನ್ನು ನನಗಾದರೂ ತಿಳಿಸಿಯೇ ತಿಳಿಸುತ್ತಾಳೆ. ಆದರೆ ನಾನೀಗ ನನ್ನ ಆಸೆಯನ್ನು ಯಾರಿಗೆ ತಿಳಿಸಲಿ! ನನಗೂ ಒಬ್ಬಳು ಅಕ್ಕನೋ, ಅಣ್ಣನೋ ಇದ್ದಿದ್ದರೇ.... ನನ್ನ ಮದುವೆಗೆಂದು ಖರ್ಚು ಮಾಡಲು ಅಪ್ಪನ ಹತ್ತಿರ ಹಣವಿಲ್ಲವೇನೋ ಅಂತ ಅನ್ನಿಸಿದಾಗ, ದುಃಖ ಒತ್ತರಿಸಿ ಬಂತು. ಬಡವರ ಮನೆಯಲ್ಲಿ ಹೆಣ್ಣಾಗಿ ಮಾತ್ರ ಹುಟ್ಟಬಾರದು ನನ್ನಂತೆ ಎಂದುಕೊಂಡು ಅತ್ತಳು.

ಕಣ್ಣೀರನ್ನು ಒರೆಸಿಕೊಳ್ಳುವಾಗ, ಮೋಹನ ತನ್ನ ಕೈಹಿಡಿದಿದ್ದ ಎಂಬ ನೆನಪಾಗಿ, ಮೈಯಲ್ಲಾ ಜುಂ ಎಂದಿತು. ಕೈಯನ್ನು ತುಟಿಗೊತ್ತಿಕೊಂಡಳು.

ಮಾರನೇ ದಿನ. ಡಾಕ್ಟರು ಮತ್ತೊಮ್ಮೆ ಪರೀಕ್ಷಿಸಿ, ಎಲ್ಲಾ ಸರಿಯಾಗಿದೆ ಎಂದು ತಿಳಿಸಿ, ಅವಳನ್ನು ಮನೆಗೆ ಕಳಿಸಿಕೊಟ್ಟರು.

"ಸುಮ್ಮನೇ ಓಡಾಡಬೇಡ. ಏನು ಬೇಕೋ ನನ್ನನ್ನು ಕೇಳು" ಎಂದು ತಾಯಿ ಹೇಳಿದ್ದಳು. ಏನೋ ಯೋಚನೆ ಮಾಡುತ್ತಾ ಮಲಗಿದ್ದವಳಿಗೆ ನಿದ್ದೆ ಬಂದಿತ್ತು. ಎಚ್ಚರವಾದ ಮೇಲೆ ಹೊಟ್ಟೆ ಹಸಿಯುತ್ತಿದೆ ಎನಿಸಿತ್ತು. ತಾಯಿ ಕೊಟ್ಟ ತಿಳಿಸಾರು ಅನ್ನ ರುಚಿಯಾಗಿದ ಅಂತ ಹೇಳಿಕೊಂಡು ಊಟ ಮಾಡಿದಳು.

"ಅಮ್ಮ ನೀನೂ ಬೇಗ ಊಟ ಮುಗಿಸಿ ಇಲ್ಲೇ ಕೂತ್ಕೋ ಬಾ" ಎಂದಿದ್ದಳು.

ತಾಯಿ ಅಂತೆಯೇ ಬಂದಳು. ಅದೂ ಇದು ಮಾತನಾಡಿ ಆದಮೇಲೆ,

"ಅಮ್ಮ ಮೋಹನಂಗೆ ಬೇಗ ಮದುವೆ ಮಾಡಿಬಿಡೋಣ.....

ಏನಂತೀಯಾ?"

"ಹುಂ, ಆಗಲಿ. ಅದಕ್ಕೇನಂತೆ. ಮೊದಲು ನಿನ್ನದು ಸುಗಮವಾಗಿ ಕಳೆಯಲಿ"

"ನನ್ನ ಮದುವೆ ಆಗಿದೆಯಲ್ಲಮ್ಮ...."

"ಅದಲ್ಲ. ಚೊಚ್ಚಲು ಹೆರಿಗೆ ಸುಗಮವಾಗಿ ಕಳೆಯಲಿ ಎಂದೆ"

"ಸರಿ. ನೀನು ಅಜ್ಜಿಯಾಗುವುದು ಅಂತ ತೀರ್ಮಾನಿಸಿಬಿಟ್ಟಿದೀಯ. ಡಾಕ್ಟರು ಏನಂದರು!"

"ಅವರು ನಿನಗೆ ಏನೂ ಹೇಳಲಿಲ್ಲವೆ!" ಮಾಲತಿ ಏನನ್ನೂ ಆಡಲಿಲ್ಲ.

"ಮುಚ್ಚಿಡ್ತಾ ಇದೀಯಾ.... ಅವರು ಇದನ್ನು ದೃಢವಾಗಿ ಹೇಳಿದ್ದಾರೆ"

"ಹೌದೇನಮ್ಮ....? ತುಥ್ ನನಗೆ ಬೇಕಿರಲಿಲ್ಲ"

"ಹಾಗೆಲ್ಲ ಅನ್ನಬಾರದು ಮಾಲತಿ. ದೇವರು ಕೊಟ್ಟಾಗ ಎರಡು ಕೈಗಳಿಂದ ತೆಗೆದುಕೊಳ್ಳಬೇಕು. ಮಕ್ಕಳಿಲ್ಲದವರು ಎಷ್ಟುಕೊರಗ್ತಾರೆ ಗೊತ್ತಾ?"

"ಈಗ್ಲೇ ಬೇಕಿರಲಿಲ್ಲ ಎಂದೆ. ಅಲ್ಲೇ ಗೊತ್ತಾಗಿದ್ದಿದ್ರೆ ಡಾಕ್ಟರಿಗೆ ಹೇಳಿ. ನಾನೇ ಏನಾದರೂ ಔಷಧಿ ತಗೋತಿದ್ದೆ."

"ಛೀ ಬಿಡ್ತು ಅನ್ನು. ನಿನ್ನ ಅತ್ತೆಮನೆಯವರಿಗೆ ತಿಳಿದರೆ ಏನಂದುಕೊಂಡಾರು!"

"ಅದೂ ಸರಿ, ನಿನ್ನ ಹಾಗೇ ಅವರೂ ಮೊಮ್ಮಗನಿಗಾಗಿ ಕಾಯುತ್ತಾ ಇರಬಹುದೇನೋ"

"ನಿನ್ನ ಯಜಮಾನರಿಗೆ ಟೆಲಿಗ್ರಾಂ ಕೊಟ್ಟು ಕರೆಸೋಣವೇನೆ! ಅವರನ್ನು ನೋಡಬೇಕು ಅಂತ ಆಸೆಯಾಗಿದ್ರೆ ತಕ್ಷಣ ಹೇಳಿಬಿಡು."

"ಹುಂ. ನಿನ್ನ ಆಸೆ. ಬಯಕೆ ಎಂದು ಮಾತನಾಡಿದ್ದೆಲ್ಲಾ ನಿಜವಾಗಿ ಹೋಯ್ತು. ಹಾಳಾದ್ದು ನನಗೆ ಗೊತ್ತಾಗ್ಲೇ ಇಲ್ಲ"

"ನೀನಿನ್ನು ಚಿಕ್ಕವಳು. ನಮ್ಮ ಅನುಭವ ನಿನಗೆಲ್ಲಿದೆ?"

"ಆಂ.... ಆಂ... ನಿನ್ನ ಮಾತು ನಿಜವಾದರೆ ನಾನು ಕೇಳಿದ್ದು ಕೊಡ್ತೀನಿ ಅಂದಿದ್ದೆ ಅಲ್ಲವಾ! ಕೊಡು ಮತ್ತೆ"

"ಏನನ್ನೇ?"

"ಮೊದಲು ಭಾಷೆಕೊಡು. ಆಮೇಲೆ ಹೇಳ್ತೀನಿ." ತಾನೆ ಬಗ್ಗಿ ತನ್ನ ತಾಯಿಯ ಕೈಗಳನ್ನು ತನ್ನ ಕೈಯೊಳಗೆ ಇರಿಸಿಕೊಂಡಳು.

"ಮಧುರನ್ನ ನೀನು ನಿನ್ನ ಸೊಸೆಯನ್ನಾಗಿ ಮಾಡಿಕೊಳ್ಳಬೇಕು"

ತಾಯಿ ತಟಕ್ಕನೇ ಹಿಂದಕ್ಕೆ ಕೈಯನ್ನು ತೆಗೆದುಕೊಂಡಳು.

"ನಿನಗೆ ಇಷ್ಟವಿಲ್ಲ ಅಂತ ಹೇಳಿ ಬಿಡಬೇಡ. ನನಗೆ ಭಾಷೆ ಕೊಟ್ಟಿದೀಯಾ...."

"ನೀನು ಹೀಗೆ ತಮಾಷೆ ಮಾಡ್ತೀಯ ಅಂತ ನಾನು ಅಂದುಕೊಂಡಿರಲಿಲ್ಲ" ಮಾಲತಿ ತಾಯಿ ಮುನಿಸಿಕೊಂಡಿದ್ದಳು.

"ತಮಾಷೆಯಲ್ಲಮ್ಮ ಇದು, ಎಷ್ಟೋ ವರ್ಷಗಳಿಂದ ಇಟ್ಟುಕೊಂಡಿದ್ದ ಆಸೆ."

"ಆ ಆಸೇನ ನೀನು ಈಗಲೇ ಕೇಳಬೇಕೇ? ನನಗಿಂತ ನಿನಗೆ ಅವಳು ಹೆಚ್ಚೆ?"

"ನೀನು ಹೆಚ್ಚು ಒಪ್ಕೋತೀನಿ..... ಆದರೆ ಅವಳು ನನ್ನ ಪ್ರಿಯ ಸ್ನೇಹಿತೆ"

"ಅವಳೇನೋ ನಿನ್ನ ಪ್ರಿಯ ಸ್ನೇಹಿತೆಯಾಗಿರಬಹುದು. ಆದರೆ ಅವಳು ನನ್ನ ಪ್ರೀತಿಯ ಸೊಸೆಯಾಗುವುದು ಸಾಧ್ಯವಿಲ್ಲ"

"ಸೊಸೆ, ಅತ್ತೆಗೆ ಪ್ರೀತಿಯ ಸೊಸೆಯಾಗುವುದು ಬಹಳ ಅಪರೂಪ"

"ನನಗಿಷ್ಟವಾದ ಹುಡುಗಿಯನ್ನೇ ನಾನು ಮೋಹನನಿಗೆ ತಂದುಕೊಳ್ಳುವುದು"

"ಅವಳು ಮೋಹನನಿಗೆ ಪ್ರೀತಿಯ ಹೆಂಡತಿಯಾಗಲು ಸಾಧ್ಯವಿಲ್ಲ"

"ಇವತ್ತೇ ಈ ವಾಗ್ವಾದ ನಡೆಯಬೇಕೇ, ನಿಧಾನವಾಗಿ ಯೋಚಿಸಿದರಾಯ್ತು. ನನಗೆ ಖಂಡುಗ ಕೆಲಸವಿದೆ" ತಾಯಿ ಏಳಲು ನೋಡಿದಾಗ, ಅವಳು ತಡೆದಳು.

"ನನಗೆ ಭಾಷೆ ಕೊಟ್ಟಿದೀಯ. ನೆನಪಿರಲಿ, ಇದೂ ನನ್ನ ಒಂದು ಮುಖ್ಯವಾದ ಬಯಕೆ. ಇದನ್ನು ತೀರಿಸದಿದ್ದರೆ ನಿನ್ನ ಮಗಳಿಗೆ ಏನು ಬೇಕಾದರೂ ಆಗಬಹುದು"

"ಅದಕ್ಕೂ ಇದಕ್ಕೂ ಏನು ಸಂಬಂಧ! ಈ ರೀತಿ ತಮಾಷೆ ಮಾಡಬೇಕಾಗಿಲ್ಲ"

"ಸರಿ, ನಿನ್ನಿಷ್ಟ." ಮಾಲತಿ ತಾಯಿಯ ಕೈಯನ್ನು ಬಿಟ್ಟಳು. ತಾಯಿ ಹೊರಟು ಹೋದಳು. ತಾನು ಮಾಡಿದ್ದು ಅತಿರೇಕವಾಯಿತೇನೋ ಎಂದೆನಿಸಿತ್ತು. ಆದರೆ ತನ್ನ ಆಸೆಯನ್ನು ತಾಯಿಗೆ ತಿಳಿಸಿ ಆಗಿತ್ತು.

ಒಳಗೆ ಹೋದ ತಾಯಿ, ಎಷ್ಟೋ ಹೊತ್ತಾದರೂ ಹೊರಗೆ ಬರಲಿಲ್ಲ. ತಾಯಿಯ ಮನಸ್ಸಿಗೆ ಬೇಜಾರಾಗಿದೆಯೆಂದು ತಿಳಿದಿತ್ತು ಹೋಗಿ ಸಮಾಧಾನ ಮಾಡುವ ಮನಸ್ಸಾದರೂ, ತಾನು ಕೇಳಿದ್ದರಲ್ಲಿ ಏನೂ ತಪ್ಪಿಲ್ಲ ಎಂದುಕೊಂಡು ಸುಮ್ಮನಾಗಿದ್ದಳು.

ಎಷ್ಟೋ ಹೊತ್ತಿನ ಮೇಲೆ, ತಾಯಿ ಕಾಫಿ ತಂದಿತ್ತಾಗ, ಕೇಳಿದ್ದಳು.

"ಅಮ್ಮ ನನ್ನ ಮೇಲೆ ನಿನಗೆ ಸಿಟ್ಟಾ!" ತಾಯಿ ಉತ್ತರಿಸಲಿಲ್ಲ.

"ನಿನಗೆ ಸಿಟ್ಟು ಬಂದಿದ್ದರೆ ಹೇಳಿ ಬಿಡು. ನಾನು ಇವತ್ತೇ ನನ್ನ ಅತ್ತೆ ಮನೆಗೆ ಹೊರಟುಹೋಗ್ತೀನಿ. ಅಲ್ಲಿಂದ ಕಲ್ಕತ್ತಾಕ್ಕೆ ಹೂರಟುಹೋಗ್ತೀನಿ"

"ಅಣ್ಣ–ತಂಗೀ ಒಳ್ಳೇ ಚೆನ್ನಾಗಿ ಮಾತನಾಡ್ತೀರಿ. ಹೀಗಾ ತಾಯಿಯ ಹತ್ತಿರ ನಡೆದುಕೊಳ್ಳುವುದು! ಏನು ಬೇಕಾದರೂ ಆಡಿಬಿಡ್ತೀರಲ್ಲ"

"ನಿನ್ನ ಹತ್ತಿರ ಸಲುಗೆ ಇದೆ. ಅದಕ್ಕೆ ಆಡ್ತೀನಿ. ನನ್ನ ಅತ್ತೆ ಹತ್ತಿರ ಹೀಗೆಲ್ಲಾ ಆಡುಕ್ಕೆ ಆಗುತ್ತಾ! ಮಧುರ ಖಂಡಿತಾ ನಿನ್ನ ಹತ್ತಿರ ಹೀಗೆಲ್ಲಾ ಆಡುಲ್ಲ"

"ನನ್ನೆದುರಿಗೆ ಅವಳ ಹೆಸರನ್ನು ಎತ್ತಬೇಡ. ಅವಳಿಂದ ನನ್ನ ನೆಮ್ಮದಿಯೇ ಕೆಟ್ಟು ಹೋಗಿದೆ."

"ಸರಿ. ನಿನ್ನ ನೆಮ್ಮದಿಯೇ ಕೆಟ್ಟು ಹೋಗುವಂತಹ ಮಾತನ್ನೇನೂ ಆಡಿಲ್ಲ ನಾನು. ನಿನಗೆ ಅಷ್ಟು ಬೇಡವಾದರೆ ಹೇಳಬಿಡು.... ಆದರೆ ನನ್ನ ಆಸೆ ಹಾಗೇ ಉಳಿದುಬಿಡುತ್ತದೆ. ಮೋಹನ ಬ್ರಹ್ಮಚಾರಿಯಾಗಿದ್ದು ಬಿಡ್ತಾನೆ"

"ನನಗೋಸ್ಕರ ಅವನೇಕೆ ಬ್ರಹ್ಮಚಾರಿಯಾಗಿರ್ತಾನೆ! ನನ್ನನ್ನು ವಿರೋಧ ಮಾಡಿಕೊಂಡರೂ ಸರಿ, ಅವಳನ್ನು ಕಟ್ಟಿಕೊಂಡು ತನ್ನ ಪಾಡಿಗೆ ತಾನು ಹೋಗ್ತಾನೆ"

"ಹಾಗೆ ಮಾಡುವವನಾಗಿದ್ದಿದ್ರೆ ಇಲ್ಲೀವರೆಗೂ ಸುಮ್ಮನಿರುತ್ತಿದ್ದನೆ! ಹಾಗೆ ಎಂದಾದರೂ ಮಾತನಾಡಿದಾನಾ!"

"ಇದುವರೆಗೂ ಆಡಿಲ್ಲ. ನಿನ್ನ ಬೆಂಬಲ ಸಿಕ್ಕಿದರೆ ಅದನ್ನೂ ಆಡ್ತಾನೆ. ಜತೆಗೆ ನಿಮ್ಮ ಅಪ್ಪ ನಿಮ್ಮಗಳ ಮಾತಿಗೇ ಬೆಲೆ ಕೊಡ್ತಾರೆ."

"ಅಪ್ಪನ್ನ ಕೇಳಿದ್ಯಾ!"

"ನಾನು ಕೇಳುಲ್ಲ"

"ಅಷ್ಟರಲ್ಲಿ ಮಧುರ ಬಂದಳು. ತಾಯಿ ಅವಳನ್ನು ನೋಡಿ, ಏನೂ ಮಾತನ್ನಾಡದೇ ತನ್ನ ಪಾಡಿಗೆ ತಾನು ಒಳಗೆ ಹೊರಟಳು."

"ಹಾಗೇ ಬರ್ತಾ ದೇವಸ್ಥಾನಕ್ಕೆ ಹೋಗಿದ್ದೆ. ನಿನ್ನ ಹೆಸರಿನಲ್ಲಿ ಅರ್ಚನೆ ಮಾಡಿಸಿದೆ. ತಗೋ ಕುಂಕುಮ ಪ್ರಸಾದ...." ತಾಯಿ ತಿರುಗಿ ನೋಡಿದಳು.

ಮಧುರ ತಾನೇ ಅವಳ ಹಣೆಗೆ ಕುಂಕುಮವನ್ನಿಟ್ಟು ಹೂ ಮುಡಿಸಿ, ಕಲ್ಲು ಸಕ್ಕರೆ ಚೂರನ್ನು ಅವಳ ಬಾಯಿಗೆ ಹಾಕಿದ್ದನ್ನು ಕಂಡಳು. ಏಕೋ

ಏನೋ ಒಂದು ತರಹದ ಭಾವನೆಗಳು ಮುತ್ತಿದವು. ತಮಗ್ಯಾರಿಗೂ ತಿಳಿಯದ್ದು ಇವಳಿಗೆ ತಿಳಿಯಿತಲ್ಲ. ಹಾಗಾದರೆ ಮಾಲತಿ ಅಷ್ಟು ಅಪ್ತಳೇ.... ಅವಳಿಗಾಗಿ ಏನು ಬೇಕಾದರೂ ಮಾಡಲು ತಾಯಾರಿರಬಹುದು ಎನಿಸಿದಾಗ ಸ್ವಾರ್ಥತೆ ಇಣುಕಿತು. ಹಾಗೇ ಹಿಂತಿರುಗಿ ಬಂದಳು.

"ದೇವಸ್ಥಾನಕ್ಕೆ ಹೋಗಿದ್ಯಾ?"

"ಹೂ. ಪ್ರಸಾದ ತಗೊಳ್ಳಿ" ಎಂದು ಅವಳು ಕೊಟ್ಟಾಗ ತೆಗೆದುಕೊಂಡಳು. ಸ್ವಲ್ಪ ಹೊತ್ತಿನ ನಂತರ, ಒಳಗಿನಿಂದ ಕರೆದಳು.

"ಮಧುರ ಸ್ವಲ್ಪ ಬಾಯಿಲ್ಲಿ"

"ಈ ಆತ್ಮೀಯತೆ ಅವಳಿಗೆ ಅಪರೂಪ. ಮಾಲತಿಯ ಕಡೆ ನೋಡಿದಳು. ಮಾಲತಿ ತನಗೇನೂ ತಿಳಿಯದೆಂದು ನುಡಿದಳು. ಅಡಿಗೆಮನೆ ಕಡೆ ಹೊರಟಳು."

"ನೋಡಮ್ಮ ನಿನ್ನ ಹತ್ತಿರ ಸ್ವಲ್ಪ ಮಾತನ್ನಾಡಬೇಕು"

"ಹೂಂ ಹೇಳಿ"

"ನಾನು ನೇರವಾಗಿ ಮಾತನಾಡುವವಳು. ನಿನ್ನನ್ನು ಮೋಹನ ಮೆಚ್ಚಿದ್ದಾನೆ. ಮಾಲತಿ ಮೆಚ್ಚಿದ್ದಾಳೆ ಅಂತ ನನಗೆ ಗೊತ್ತು. ಆದರೆ ನೀನು ಈ ಮನೆಗೆ ನನ್ನ ಸೊಸೆಯಾಗಿ ಬರುವುದು ನನಗಿಷ್ಟವಿಲ್ಲ. ನೀನು.... ಅವರಿಬ್ಬರಿಗೂ ನಿನಗೆ ಒಪ್ಪಿಗೆ ಇಲ್ಲ ಅಂತ ಹೇಳಬೇಕು. ಆಗ ನನ್ನ ಮೇಲೆ ಆಕ್ಷೇಪಣೆ ಇರುವುದಿಲ್ಲ."

ಮಧುರ ತಣ್ಣಗಾದಳು. ಇದು ಸ್ವಾರ್ಥದ ಪರಮಾವಧಿ. ತಾವು ಪ್ರೇಮಿಗಳು ಎಂದೂ ಬಾಯಿ ಬಿಟ್ಟು ಹೇಳಿಕೊಂಡವರಲ್ಲ. ಮೋಹನ ಮೆಚ್ಚಿದರೆ ನನ್ನನ್ನು ಏಕೆ ಕೇಳಬೇಕು.... ಅವನಿಗೇ ಏಕೆ ಹೇಳಲಿಲ್ಲ? ಎಂದೆನಿಸಿ ಅವಳಿಗೆ ಅಳು ಬರುವಂತಾಯ್ತು.

"ಆಗಲಿ, ನಿಮಗೆ ಇಷ್ಟವಿಲ್ಲವೆಂದಮೇಲೆ ಆಗಲಿ, ನಿಮ್ಮ ಮನಸ್ಸಿಗೆ ವಿರುದ್ಧವಾಗಿ ನಾನು ಈ ಮನೆಗೆ ಸೊಸೆಯಾಗಿ ಬಂದು, ಖಂಡಿತಾ ನೆಮ್ಮದಿಯಿಂದಿರುವುದಿಲ್ಲ. ಈ ಜನ್ಮದಲ್ಲಿ ನನಗೆ ಮದುವೆ ಇಲ್ಲದಿದ್ದರೂ ಪರವಾಗಿಲ್ಲ. ನಾನು ನಿಮ್ಮ ದ್ವೇಷವನ್ನು ಬಯಸುವುದಿಲ್ಲ. ನಾನು ನಿಮ್ಮ ಸ್ನೇಹವನ್ನು ಮಾತ್ರ ಬಯಸ್ತೀನಿ" ಅಷ್ಟು ಹೇಳಿ ಮಧುರ ದುಃಖ ತಡೆಯಲಾರದೇ ಹೊರಗೆ ಬಂದಳು. ಹೊರಗೆ ಬಾಗಿಲ ಬಳಿ, ಮೋಹನ ಮಾಲತಿ ಇಬ್ಬರೂ ನಿಂತಿದ್ದನ್ನು ಕಂಡು ಪೆಚ್ಚು ನಗೆ ನಕ್ಕಳು. ಹಿಂದೆಯೇ ಬಂದಿದ್ದ ಭವಾನಮ್ಮನೂ ಅವರಿಬ್ಬರನ್ನು ಗಮನಿಸಿದಳು. ಅವಳ ಮುಖ ಚಿಕ್ಕದಾಯಿತು.

ಅವರಿಬ್ಬರಿಗೂ ತಾಯಿಯ ಅತಿರೇಕ ರೇಗಿಸಿತ್ತು. ಮಧುರ ಮುಂದೆ ಹೆಜ್ಜೆ ಇಟ್ಟರೂ, ಮಾಲತಿಯಾಗಲೀ, ಮೋಹನನಾಗಲೀ ಅವಳನ್ನು ತಡೆಯಲಿಲ್ಲ. ಒಂದು ವೇಳೆ ಯಾರೇ ಹಾಗೆ ಮಾಡಿದ್ದರೂ, ಮಧುರ ಕೊಸರಿಕೊಂಡು ಹೋಗುತ್ತಿದ್ದಳು.

ಇಬ್ಬರೂ ತಾಯಿಯ ಕಡೆ ಕೆಟ್ಟದಾಗಿ ನೋಡಿದಾಗ, ಆಕೆಗೆ ಭೂಮಿಬಾಯಿ ಬಿಡಬಾರದೇ ಎನ್ನುವಷ್ಟು ಹೀನಾಯವಾಗಿತ್ತು. ತಾನು ಸಾಧಿಸಿದ್ದೇನು? ಇವರಿಬ್ಬರ ದ್ವೇಷವನ್ನು ಕಟ್ಟಿಕೊಂಡೆ ಎನಿಸಿದಾಗ, ಮಕ್ಕಳ ಪ್ರೀತಿಯಿಲ್ಲದೇ ತಾನು ಹೇಗಿರಬಲ್ಲೇ ಎಂದೂ ಅನ್ನಿಸಿತ್ತು.

ಮಧುರ ಬಾಗಿಲು ದಾಟಿ ಹೋಗುವುದನ್ನೇ ನೋಡುತ್ತಿದ್ದಳು. ಅವಳ ಹಿಂದೆಯೇ ಸರಸರನೆ ನಡೆದಳು. ಮೋಹನನಾಗಲಿ, ಮಾಲತಿಯಾಗಲೀ ಅಲ್ಲಾಡಲಿಲ್ಲ. ನಿಂತಲ್ಲೇ ನಿಂತಿದ್ದರು. ಅವರಿಬ್ಬರ ಮುಖ ಅವಮಾನ, ರೋಷಗಳಿಂದ ಕೆಂಪಾಗಿತ್ತು.

ಗೇಟನ್ನು ಸಮೀಪಿಸಿದ ಮಧುರ, ಆಕೆಯ ಧ್ವನಿ ಕೇಳಿ ನಿಂತಳು. ಈಕೆ ಹತ್ತಿರ ಬಂದು ಅವಳನ್ನೇ ನೋಡಿದಳು. ಮುಖದಲ್ಲಿ ಅಸಮಾಧಾನದ ಗೆರೆಯಾಗಲೀ ದುಗುಡದ ಚಿನ್ಹೆಯಾಗಲೀ ಕಾಣಲಿಲ್ಲ. ಮೊಟ್ಟಮೊದಲ ಬಾರಿಗೆ ಅವಳು ಮೆಚ್ಚುಗೆಯಾದಳು.

ಅವಳ ಸಮೀಪ ಬಂದು, ಪಿಸುದನಿಯಲ್ಲಿ ನುಡಿದಳು.

"ಛೀ ಹುಚ್ಚಿ, ನನ್ನ ಮಾತನ್ನೆಲ್ಲ ನಿಜ ಅಂತ ತಿಳಿದುಕೊಂಡೆಯಾ! ನಾನು ನಿನ್ನನ್ನು ಪರೀಕ್ಷಿಸಿದೆ ಅಷ್ಟೆ. ನೀನೇ ನನ್ನ ಸೊಸೆ ಅಂತ ತೀರ್ಮಾನಿಸಿ ಎಷ್ಟೋ ವರ್ಷಗಳಾದವು. ನೀವೆಲ್ಲಾ ನನ್ನನ್ನು ಸತಾಯಿಸಿದಿರಿ ಅಲ್ಲವೆ! ನಾನೂ ಸತಾಯಿಸಿದೆ ಅಷ್ಟೆ."

ಅದೇನು ಸುಳ್ಳೋ, ನಾಟಕವೋ ಅವಳಿಗೆ ಅರ್ಥವಾಗಲಿಲ್ಲ.

"ನೀನು ಏನು ಬೇಕಾದರೂ ಅಂದ್ಕೋ, ನಿನ್ನನ್ನು ಒರೆಗೆ ಹಚ್ಚಿದಷ್ಟೂ ನೀನು ಅಪರಂಜಿ ಎಂದು ನನಗೆ ದೃಢವಾಯ್ತು. ಈಗ ನೀನು ಮನೆಗೆ ಹೋಗು. ಈಗಲೇ ಯಾರಿಗೂ ಹೇಳಬೇಡ. ಅಲ್ಲಿ ನಿಂತ್ಕೊಂಡು ನನ್ನನ್ನು ದುರದುರನೆ ನೋಡುತ್ತಿದ್ದಾರಲ್ಲ. ಅವರಿಬ್ಬರನ್ನೂ ಇನ್ನೊಂದಿಷ್ಟು ಸತಾಯಿಸ್ತೀನಿ" ಅಷ್ಟಾದರೂ ಅವಳು ನಂಬದವಳಂತೆ ನಿಂತಿದ್ದಳು.

"ನಾನು ನಾಳೆಯೇ ಬಂದು, ನಿನ್ನ ತಂದೆ ತಾಯಿಯ ಹತ್ತಿರ ಮಾತನಾಡ್ತೀನಿ. ಈಗಲೂ ನಿನಗೆ ನಂಬಿಕೆ ಬರುತ್ತಿಲ್ಲ ಅಲ್ಲವೆ! ತಗೋ ಇದನ್ನು ಹಾಕ್ಕೋ"

ಎನ್ನುತ್ತಾ ತನ್ನ ಕೈ ಬೆರಳಿನಿಂದ ಹಳೆಯ ಹರಳಿನ ಉಂಗುರವನ್ನು ತೆಗೆದು ಅವಳ ಕೈಗಿತ್ತಳು.

ಮಧುರ ಬಾಗಿ ನಮಸ್ಕರಿಸಿದಳು. ಅದನ್ನು ಅವರಿಬ್ಬರೂ ಒಳಗಿನಿಂದಲೇ ಕಂಡು ಮುಖ ಮುಖ ನೋಡಿಕೊಂಡರು. 'ಇನ್ನು ಈ ಮನೆ ಕಡೆ ತಲೆ ಹಾಕಬೇಡ' ಎಂದು ಹೆದರಿಸಿರಬೇಕು ಎಂದುಕೊಂಡರು.

ಮಧುರ ಹೊರಟುಹೋದ ಮೇಲೂ ಆಕೆ ಎಷ್ಟೋ ಹೊತ್ತಿನ ತನಕ ಹಾಗೇ ನಿಂತಿದ್ದಳು. 'ತಾನು ಮಾಡಿದ್ದು ತಪ್ಪೋ ಸರಿಯೋ, ಸ್ವಾರ್ಥವೋ, ತ್ಯಾಗವೋ, ಲಾಭವೋ ನಷ್ಟವೋ ಎಂದು ಅರಿಯದ ಅವಸ್ಥೆಯಲ್ಲಿದ್ದಳು. ಮಕ್ಕಳು ಬಂದು ಏನೆಂದು ವಿಚಾರಿಸದಿದ್ದಾಗ ವಿಷಾದವೆನಿಸಿತು.'

"ಏನೇ ಇಲ್ಯಾಕೇ ನಿಂತಿದೀಯ? ಅಡಿಗೆ ಆಯ್ತೆ?" ಅಂತ ಗಂಡ ವಿಚಾರಿಸಿದಾಗ ಎಚ್ಚೆತ್ತಳು. ಇವರಿಗೆ ಬರೀ ಊಟದ ಚಿಂತೆ ಎಂದುಕೊಂಡಳು. ಗಂಡ ಹೆಂಡತಿ ಒಟ್ಟಾಗಿ ಒಳಗೆ ಬಂದರು. ಆಕೆ ತನ್ನ ಪಾಡಿಗೆ ತಾನು ಅಡಿಗೆ ಮನೆಗೆ ಹೋದಳು. ಕೆಟ್ಟ ಮುಖ ಹಾಕಿಕೊಂಡು, ಮೌನವಾಗಿ ನಿಂತಿದ್ದ ಮಕ್ಕಳ ಮುಖ ನೋಡಿ ಕೈ ಸಂಜ್ಞೆ ಮಾಡಿ ಪ್ರಶ್ನಿಸಿದರು. ಏನಿಲ್ಲ ಎನ್ನುವಂತೆ ಮಕ್ಕಳೂ ಸಂಜ್ಞೆಯಿಂದ ಉತ್ತರಿಸಿದ್ದರು.

ರಾತ್ರಿ ಊಟಕ್ಕೆ ಎಲ್ಲರಿಗೂ ಪಾಯಸ ಬಡಿಸಿದಾಗ ಎಲ್ಲರಿಗೂ ಅಚ್ಚರಿ. ಇನ್ನು ಈ ಮನೆಗೆ ಮಧುರ ಬರುವುದಿಲ್ಲವೆಂದು ಹೇಳಿರಬೇಕು. ಅದಕ್ಕೇ ಅವಳಿಗೆ ಸಂತೋಷವಾಗಿದೆ. ಅದಕ್ಕೇ ಪಾಯಸ ಮಾಡಿದ್ದಾಳೆ ಎಂದುಕೊಂಡರು. ತಂದೆ ಮಾತ್ರ "ಇದೇನೇ ಪಾಯಸ ಮಾಡಿದೀಯ? ಯಾರ ಹುಟ್ಟಿದ ಹಬ್ಬ ಇವತ್ತು?"

"ನನ್ನದೇ...."

"ಹೌದೇನೇ, ಎಷ್ಟು ವರ್ಷ ನಿನಗೆ!"

"ಹೆಂಗಸರ ವಯಸ್ಸನ್ನು ಕೇಳಬಾರದು"

"ತಾಯಿಯ ತಮಾಷೆಯ ಮೂಡ್, ಮಕ್ಕಳಿಗೆ ಬೇಸರವನ್ನು ತರಿಸಿತು. ಪಾಯಸವನ್ನು ಕುಡಿಯಬೇಕೆಂಬ ಮನಸ್ಸಾಗಲಿಲ್ಲ. ಆದರೆ ಪಾಯಸವನ್ನು ಚೆಲ್ಲಬಾರದು ಅಂತ ಚಿಕ್ಕವಯಸ್ಸಿನಲ್ಲಿ ಕಲಿಸಿದ ಪಾಠ, ಕುಡಿಯದಿದ್ದರೆ, ತಾಯಿಯ ಹುಟ್ಟು ಹಬ್ಬದಂದು ಅವಳನ್ನು ತಿರಸ್ಕರಿಸಿದಂತಾಗುತ್ತದೆ ಎಂದುಕೊಂಡು, ಮೋಹನ ಗಟಗಟನೇ ಕುಡಿದ. ನಂತರ ಮಾಲತಿಯೂ ಕುಡಿದಳು. ಭವಾನಮ್ಮ ಮನದಲ್ಲೇ ನಕ್ಕರು."

ಆ ರಾತ್ರಿ ಭವಾನಮ್ಮ ಪಿಸುದನಿಯಲ್ಲಿ ತಂದೆಯೊಡನೆ ಮಾತನಾಡುತ್ತಿದ್ದುದು ಕೇಳಿಸಿತ್ತು. ತನ್ನ ಗೆಲುವಿನ ಬಗ್ಗೆ ಹೇಳಿಕೊಳ್ಳುತ್ತಿದ್ದಾಳೆಂದೇ ಬಗೆದರು. ಭವಾನಮ್ಮ ಸೋತು ಗೆದ್ದಿದ್ದಳೋ, ಗೆದ್ದು ಸೋತಿದ್ದಳೋ ಅವಳಿಗೇ ಗೊತ್ತಿರಲಿಲ್ಲ.

ನಿತ್ಯದಂತೆ ಬೆಳಗಾಯಿತು. ಮೋಹನ ಆಫೀಸಿಗೆ ಹೊರಟ. ಅಡಿಗೆ ಊಟ ಎಲ್ಲಾ ಮುಗಿಯಿತು. ಮಾಲತಿಯೂ ಏನನ್ನು ಆಡಿರಲಿಲ್ಲ. ಆಕೆಯೂ ಏನೂ ಹೇಳಿರಲಿಲ್ಲ ಮಗಳಿಗೆ. ಆತಂಕದಿಂದ ಏನಾದರೂ ಹೆಚ್ಚು ಕಡಿಮೆ ಆದರೆ ಅಂತ ಅನ್ನಿಸಿದರೂ, ತಾನೀನು ಮಾಡುತ್ತಿರುವುದು ಅವಳನ್ನು ಒಲಿಸಲೆಂದೇ, ಏನೂ ಆಗುವುದಿಲ್ಲ ಎಂದು ಧೈರ್ಯ ತಂದುಕೊಂಡಳು.

ಮಧ್ಯಾಹ್ನದ ಕಾಫಿಯ ನಂತರ, ಅಚ್ಚುಕಟ್ಟಾಗಿ ಅಲಂಕರಿಸಿಕೊಂಡು ಪತಿಯೊಡನೆ ಹೊರಹೊರಟಳು. "ಕಾಫಿ, ತಿಂಡಿ ಎಲ್ಲಾ ಕೈಗೆ ಸಿಗುವ ಹಾಗಿದೆ. ನಾವಿಬ್ಬರೂ ಸ್ವಲ್ಪ ಹೊರಗೆ ಹೋಗಿ ಬರ್ತೀವಿ" ಹೊರಡುವ ಮುಂಚೆ ಮಗಳಿಗೆ ಕಾಣಲೆಂದು ದೇವರ ಪಟಕ್ಕೆ ಕೈ ಮುಗಿದು ಹೊರಟಳು.

ಮಾಲತಿ ಎಲ್ಲಿಗೆ ಎಂದು ಕೇಳಲಿಲ್ಲ. 'ಹಾಗಾದರೆ ಅಪ್ಪನೂ ಅಮ್ಮನ ಕಡೆಗೇ ತಿರುಗಿಬಿಟ್ಟರೇ.... ಅವತ್ತು ಅಷ್ಟು ಆಡಿದ್ದೆಲ್ಲಾ ಎಲ್ಲಿ ಹೋಯಿತು' ಎಂದು ಕೊಂಡಳು. ಅವರು ಹೋದ ಸ್ವಲ್ಪ ಹೊತ್ತಿನ ನಂತರ ಮೋಹನ ಮನೆಗೆ ಬಂದ. ಆಫೀಸಿನಲ್ಲಿ ಕುಳಿತಿರಲು ಆಗದೇ ನಿತ್ಯಕ್ಕಿಂತ ಮುಂಚೆಯೇ ಬಂದಿದ್ದ. ಮಾಲತಿ ತಾನಾಗಿಯೇ ಹೇಳಿದಳು.

"ಅಪ್ಪ ಅಮ್ಮ ಇಬ್ಬರೂ ಯಾರ ಮನೆಗೋ ಹೋದರು ಅಂತ ಕಾಣಿಸುತ್ತೆ"

"ಹೋಗಲಿ ಬಿಡು. ನನಗೇನು" ಎಂದಿದ್ದ

"ಯಾರೋ ಹೆಣ್ಣಿನ ಮನೆಗೇ ಇರಬೇಕು"

"ನನಗೆ ತಿಳಿಸದೇ ಮದುವೆ ಸೆಟ್ಲ್ ಮಾಡುವುದಂತೂ ಸಾಧ್ಯವಿಲ್ಲ ಬಿಡು. ಆದರೆ ನೆನ್ನೆ ಅಮ್ಮ ಮಧುರನ ಹತ್ತಿರ ನಡೆದುಕೊಂಡ ರೀತಿ ಅವಮಾನಕರ."

"ನೀನೂ ಸುಮ್ಮನಿದ್ದೆಯಲ್ಲ"

"ಆಗ ನಾನು ಅವಳ ಪರವಹಿಸಿ ಮಾತಾಡಿದ್ದರೆ, ಇನ್ನೂ ದೊಡ್ಡ ರಂಪವಾಗುತ್ತಿತ್ತು. ಮಧುರ ಸಹ ನನಗೇ ತಿಳುವಳಿಕೆ ಹೇಳಿರುತ್ತಿದ್ದಳು."

"ಪಾಪ, ಅವಳಿಗೆ ನಮ್ಮ ಸ್ನೇಹದಿಂದ ಎಂತಹ ಅವಮಾನ? ಅವಳನ್ನು ಕ್ಷಮೆ ಸಹ ಕೇಳಲಿಲ್ಲ ನಾವು. ಈಗ ಬರ್ತೀಯಾ ಹೋಗಿ ಬರೋಣ!"

"ಹೂಂ ನಡಿ. ನಾನೂ ಹಾಗೇ ಅಂದುಕೊಂಡಿದ್ದೆ. ಈ ಸಂಭ್ರಮಕ್ಕೆ ನಾನು ಅವರ ತಂದೆ ಜತೆ ಸಹ ಮಾತನಾಡಿದ್ದೆ."

"ಹೌದಾ! ಅವರು ಒಪ್ಪಿದ್ರು ತಾನೇ..."

"ಅಲ್ಲೂ ಒಂದು ದೊಡ್ಡ ಪುರಾಣ. ತನ್ನ ಮನೆಯ ಕತೆಯನ್ನೆಲ್ಲಾ ಹೇಳಿಕೊಂಡರು ಆತ"

"ಅವರ ಪುರಾಣ ಪುಣ್ಯಕತೆ ಕಟ್ಟಿಕೊಂಡು ಏನಾಗಬೇಕು? ಆದರೆ ಮಗಳಿಗೆ ನಮ್ಮಿಂದ ಅವಮಾನವಾಯ್ತು ಅಂತ ತಿಳಿದರೆ ಅವರು ಏನಂದುಕೊಂಡಾರು? ಆಕೆಯ ಮನೆಯ ಅನ್ನದ ಋಣ ಜನ್ಮ ಜನ್ಮಕೂ ಮುಗಿಯಲ್ಲ. ನಡೀ ಬೇಗ ಹೋಗಿ ಬರೋಣ. ಅವರು ಬರುವಷ್ಟರಲ್ಲಿ ಬಂದು ಬಿಡೋಣ"

ಇಬ್ಬರೂ ಬೀಗ ಹಾಕಿಕೊಂಡು ಹೊರಟರು. ಇವರಿಬ್ಬರೂ ಮಧುರಳ ಮನೆ ತಲುಪುವ ಹೊತ್ತಿಗೆ ಅವರೆಲ್ಲರೂ ಮುಖ್ಯವಾದ ಮಾತುಕತೆಗಳನ್ನು ಮುಗಿಸಿ ಆಗಿತ್ತು. ಒಳಗೆ ಯಾರೋ ಇದ್ದಾರೆ ಎಂಬ ಅನುಮಾನದಿಂದ ಇಣುಕಿ ನೋಡಿದಾಗ, ತಂದೆ ತಾಯಿ ಕುಳಿತಿದ್ದುದು ಕಂಡುಬಂತು. ಇದ್ಯಾವ ಅವತಾರ ಅಮ್ಮನದು ಎಂದು ಕೊಳ್ಳುತ್ತಿರುವಂತೆಯೇ, ಭವಾನಮ್ಮ....

"ಬಾರೇ ಮಾಲತಿ, ಬಾರೋ ನಾನೇ ಮೂರು ಜನ ಆಗುತ್ತೆ. ನೀನು ಆಮೇಲೆ ಬಾ ಎಂದಿದ್ದೆ" ಎಂದಳು.

ಇಬ್ಬರಿಗೂ ಮಾತಿನ ಹಿಂದು ಮುಂದು ಅರ್ಥವಾಗಲಿಲ್ಲ. ಅನುಮಾನಿಸುತ್ತಾ ಒಳಗೆ ಅಡಿಯಿಟ್ಟರು. ತಾಯಿ ತಂದಿದ್ದ ಹೂವು ಹಣ್ಣುಗಳು, ಬೆಳ್ಳಿಯ ತಟ್ಟೆಯನ್ನು ಅಲಂಕರಿಸಿದ್ದವು.

"ಮಧುರ, ನಿನ್ನ ಅತ್ತೆ ಮಾವನಿಗೆ ನಮಸ್ಕಾರ ಮಾಡಮ್ಮ...." ಎಂದು ಶೇಷಾದ್ರಿ ನುಡಿದಾಗ, ಇಬ್ಬರೂ ಕಕ್ಕಾಬಿಕ್ಕಿ. ನಿತ್ಯಕ್ಕಿಂತ ಹೆಚ್ಚಿನ ಆಸಕ್ತಿ ತೋರಿಸಿ, ಅಲಂಕರಿಸಿಕೊಂಡು, ತನಗೊಪ್ಪುವ ಸೀರೆ ಉಟ್ಟು ಮಧುರ ಹೊರಗೆ ಬಂದಳು. ಮಾಲತಿ ಮೋಹನನ ಕಣ್ಣು ತಪ್ಪಿಸಿದಳು. ತುಟಿಯಂಚಿನ ತುಂಟನಗೆಯನ್ನು ಮೋಹನ ಕಂಡ.

"ಇರಲಿ. ಮಾಡ್ತೀನಿ ಇವಳಿಗೆ" ಎಂದುಕೊಂಡ ತನ್ನಲ್ಲೆ. ಈ ಚಮತ್ಕಾರ ಹೇಗೆ ಉಂಟಾಯಿತು ಎಂದು ಮಾತ್ರ ಅರ್ಥವಾಗಿರಲಿಲ್ಲ.

"ನಮಗೆ ಯಾವ ಆಡಂಬರವೂ ಬೇಡ. ಸರಳವಾಗಿ ಮದುವೆ ಮಾಡಿಕೊಡಿ. ನಾವುಗಳು ಹೆಚ್ಚು ಜನರೂ ಬರುವುದಿಲ್ಲ. ಮುಖ್ಯವಾದ ನೆಂಟರಿಷ್ಟರು

ಮಾತ್ರ. ಈಗಲೇ ನಮ್ಮ ಅಳಿಯನಿಗೆ ಟ್ರಂಕ್‌ಕಾಲ್ ಮಾಡಿ ವಿಷಯ ತಿಳಿಸಿ ಬಿಡ್ತೀವಿ" ಎಂದು ತಂದೆ ನುಡಿದಾಗ ಮೋಹನ ಭಾವಪರವಶನಾಗಿದ್ದ. ತಮ್ಮೆಲ್ಲರ ಆಸೆ ನೆರವೇರುತ್ತಿದೆ. ಆದರೆ ತಾಯಿಯ ಅಂತರಾಳದಲ್ಲೇನಿದೆ ಎಂದು ಅರಿವಾಗಲಿಲ್ಲ.

"ವೈದೇಹಮ್ಮ.... ಇನ್ನು ಮೇಲಾದರೂ ನೀವು ಬಿಗುಮಾನ ಬಿಟ್ಟು ಚುರುಕಾಗ ಬೇಕು. ಮಾಲತಿಯ ಮದುವೇಲಿ ಬಂದು ಆಶೀರ್ವಾದ ಮಾಡಲು ಸಹ ಆಗಲಿಲ್ಲ. ಈಗ ನಿಮ್ಮ ಮಗಳ ಮದುವೆಯ ತಯಾರಿಯೆಲ್ಲಾ ನಿಮ್ಮದೇ...." ಆಕೆಯನ್ನು ಬಲವಂತವಾಗಿ ಮಾತಿಗೆಳೆದಳು.

"ನಮ್ಮ ಅದೃಷ್ಟವಮ್ಮ..... ನಿಮ್ಮಂತಹ ಬೀಗರು ಸಿಕ್ಕಿದಿರಿ. ನಾವು ಅವಳ ಮದುವೆ ಬಗ್ಗೆ ಯೋಚಿಸಿಯೇ ಇರಲಿಲ್ಲ."

"ಹೆಣ್ಣು ಮಗಳ ತಾಯಿಯಾಗಿ ನೀವು ಹೀಗೆ ಹೇಳ್ತೀರಲ್ಲ. ನಾವು ಮಧುರಳನ್ನು ಕಂಡ ದಿನದಿಂದಲೇ ತೀರ್ಮಾನಿಸಿ ಬಿಟ್ಟಿದ್ದೆವು ಇವಳೇ ನಮ್ಮ ಮೋಹನನ ಹೆಂಡತಿ ಅಂತ" ತಾಯಿ ನುಡಿದಾಗ, ಅತೀ ಉತ್ಪ್ರೇಕ್ಷೆ ಎಂದುಕೊಂಡ. ಮಾಲತಿ ನಕ್ಕಳು. ಹಾಗಾದರೆ ನಾನೇ ಮನೋಹರನ ಹೆಂಡತಿ ಅಂತ ಅಮ್ಮ ತೀರ್ಮಾನಿಸಿದ್ದಳೇ ಎಂದು ಕೇಳಬೇಕೆಂದುಕೊಂಡಳು.

ಮಧುರ ನಮಸ್ಕರಿಸಿದಾಗ, ಬಾಯ್ತುಂಬಾ ಹರಸಿದರು. ರಾಗಿಣಿ ಎಲ್ಲರಿಗೂ ಕಾಫಿ ತಿಂಡಿ ಕೊಟ್ಟಳು. ಹೆಚ್ಚು ಸಂಕೋಚ ತೋರದೇ ತಾಯಿ ತಿಂಡಿ ತಿಂದಾಗ ಇಬ್ಬರೂ ಬೆಪ್ಪಾದರು.

"ನಮ್ಮ ಮಾಲತಿ, ನಿಮ್ಮ ಮನೆ ತಿಂಡೀನ ಸದಾ ಹೊಗಳ್ತಾಳೆ. ಮಧುರಂಗೂ ಎಲ್ಲಾ ಕಲಿಸಿದೀರಿ ತಾನೇ?"

"ನಿಮ್ಮ ರಾಗಿಣಿ ತುಂಬಾ ಜಾಣೆ. ಮಾಲತಿಯ ಮಾವನಿಗಂತೂ ತುಂಬಾ ಮೆಚ್ಚುಗೆಯಾದಳು. ನಾವೆಲ್ಲಾ ಹೆದರಿಬಿಟ್ಟಿದ್ದೆವು." ಆ ಮಾತು ಈಗೇಕೆ ಎಂದುಕೊಂಡಳು ಮಾಲತಿ. ಆ ವಿಷಯ ಅವಳ ತಂದೆ ತಾಯಿಯರಿಗೆ ತಿಳಿದೇ ಇರಲಿಲ್ಲ.

"ರಾಗಿಣಿಯ ಮದುವೆ ಬಗ್ಗೇನಾದ್ರೂ ಈಗಲಿಂದ ಚಿಂತಿಸಿ. ನಾವೂ ಸಹಾಯ ಮಾಡ್ತೀವಿ" ಅನಾವಶ್ಯಕವಾದ ಮಾತು ಎಂದುಕೊಂಡ.

ಅಂತೂ ಕಡೆಗೂ ಎಲ್ಲರೂ ಹೊರಟರು. ಇನ್ನು ಹತ್ತೇ ದಿನಕ್ಕೆ ಮದುವೆ ಎಂದು ತಾವೇ ನಿರ್ಧರಿಸಿಕೊಂಡಿದ್ದರು. ವೈದೇಹಮ್ಮ ಮಾಲತಿ ಹಾಗೂ, ಭವಾನಮ್ಮನಿಗೆ ಅರಿಶಿನ ಕುಂಕುಮ ಹೂ ಹಣ್ಣು ಸಹಿತ ಎಲೆ ಅಡಿಕೆಕೊಟ್ಟಳು.

ಮಧುರನ ಹಿಂದೆ ಮಾಲತಿ ಒಳಗೆ ಹೋಗಿ ಕೇಳಿದ್ದಳು.

"ಇದ್ದಕ್ಕಿದ್ದಂತೆ ಅದೇನು ಮಂತ್ರ ಮಾಡಿದೆಯೆ! ನನಗಂತೂ ಮ್ಯಾಜಿಕ್ ತರಹ ಅನ್ನಿಸ್ತಿದೆ"

"ನನಗೂ ಗೊತ್ತಿಲ್ಲ. ಗೇಟಿನ ಹತ್ತಿರ ನನ್ನ ಕೈಗೆ ಈ ಉಂಗುರವನ್ನು ಕೊಟ್ಟು, ನಾಳೆ ಬರ್ತೀವಿ ಅಂತ ಹೇಳಿದ್ದರು. ನಾನೂ ನಂಬಿರಲಿಲ್ಲ"

"ಎನಿವೇ ಕಂಗ್ರಾಟ್ಸ್" ಎಂದಳು ಕೈ ಕುಲಕಿ. ಅತ್ತಿತ್ತ ನೋಡಿ ಮಧುರ ಕೇಳಿದ್ದಳು. "ಮೋಹನನ್ನ ಒಂದ್ನಿಮಿಷ ಕಳಿಸ್ತೀಯಾ?"

"ಪರವಾಗಿಲ್ಲ ನಂಗೇ ಹೇಳು....." ಎಂದಳು ತಮಾಷೆಯಾಗಿ.

"ಈ ಉಂಗುರಾನ ಅವರಿಗೆ ಕೊಟ್ಟುಬಿಡು.... ನನ್ನ ಪರವಾಗಿ"

"ಹಾಗಾದ್ರೆ ಅವನನ್ನೇ ಕಳಿಸ್ತೀನಿ. ನೀನೇ ತೊಡಿಸಿಬಿಡು"

ಆದರೆ ಮೋಹನ ಒಳಗೆ ಹೋಗಲು ಒಪ್ಪಲಿಲ್ಲ. 'ಸುಮ್ಮನಿರು' ಎಂದು ಗದರಿಬಿಟ್ಟ.

"ಎಲ್ಲಾ ಆಯ್ತು ಎಂದರೆ ಈಗ ನಿಂದೇನೋ ಹೊಸಾ ನಖರಾ?"

ಅವನು ಉತ್ತರಿಸದೇ ಗಂಭೀರವಾಗಿದ್ದುದ್ದನ್ನು ಮಧುರ ಸಹ ಗಮನಿಸಿದಳು.

"ಪಾಪ, ನಿನಗೋಸ್ಕರಾನೇ ಕಾಯ್ತಿದ್ದಾಳೆ. ಒಂದೇ ಒಂದು ನಿಮಿಷ ಹೋಗಿ ಏನೂಂತ ಕೇಳಬಾರದೇ?"

"ಅವಳಿಗೆ ಹೇಳು, ಇನ್ನು ಹತ್ತು ದಿನಕ್ಕೆ ಒಂಟಿಯಾಗಿ ನನ್ನ ಕೈಗೆ ಸಿಗ್ತಾಳಲ್ಲ. ಆಗ ವಿಚಾರಿಸಿಕೊಳ್ತಾನಂತೆ ಅಂತ"

ಮಾಲತಿ ಕಿಲಕಿಲನೆ ನಕ್ಕು, ಆ ಸಂದೇಶವನ್ನು ಸ್ನೇಹಿತೆಗೆ ತಲುಪಿಸಿದಳು. ನಾಚಿಕೆಯಿಂದ ಅವಳು ಕೆಂಪಾದಳು. ಮಧುರವಾಗಿ ಕಂಪಿಸಿದಳು.

ಆನಂತರ ಉಳಿದ ದಿನಗಳು ಬಹಳ ಬೇಗ ಕಳೆದುಹೋದವು. ಇಬ್ಬರ ಮನೆಯವರೂ ಒಟ್ಟಾಗಿ ಮದುವೆಯ ಸಿದ್ದತೆಗಳನ್ನು ನಡೆಸಿದರು. ಮುಖ್ಯವಾದ ಕೆಲವರಿಗೆ ಮಾತ್ರ ಆಮಂತ್ರಣ ಕೊಟ್ಟಿದ್ದರು. ಮನೋಹರ ಎರಡು ದಿನ ಮುಂಚಿತವಾಗಿ ಬರುವುದಾಗಿ ತಿಳಿಸಿದ್ದ.

ಭವಾನಮ್ಮ ತಾವೇ ಖುದ್ದಾಗಿ, ಮಗಳಿಗೆ ಮಾಡಿಸಿದಂತಹುದೇ ಒಂದು ಸೆಟ್ ಒಡವೆ ಮಾಡಿಸಿದ್ದಳು. ಮಾಲತಿ ಸಂತೋಷಿಸಿದಳು. ಮೋಹನ ಮಾತ್ರ ತೋರಿಕೆಗೆ, ತನಗೇನೂ ಸಂಬಂಧವಿಲ್ಲವೆನ್ನುವಂತೆ ನಟಿಸಿದ.

"ನೋಡೇ ಹೇಗಾಡ್ತಾನೆ? ನೀವು ಹೇಳಿ ಹೇಳಿದ ಹಾಗೆಲ್ಲಾ ಕೇಳಿ, ನನ್ನ ಅಭಿಮಾನವನ್ನು ಬದಿಗಿಟ್ಟು ಮದುವೆಗೆ ಒಪ್ಪಿಗೆ ಕೊಟ್ಟೆ. ಈಗ ನನ್ನನ್ನು

ಮೆಚ್ಚಿಸುವಂತೆ ಆಡ್ತಿದ್ದಾನಲ್ಲ"

"ಆಡಲಿ ಬಿಡಮ್ಮ. ನಿನಗೇನು ನಷ್ಟ? ತಾಯಿಗೊಂದು ಕಾಲ, ಮಗನಿಗೊಂದು ಕಾಲ ಅಂತ ಹೊಸ ಗಾದೆ ಹುಟ್ಟಿಕೊಳ್ಳುತ್ತೆ ಅಷ್ಟೆ"

"ನನ್ನ ಮೇಲಿನ ಕೋಪಕ್ಕೆ ಆ ಹುಡುಗೀನೂ ಸತಾಯಿಸಿದರೆ?"

"ಹಾಗೆ ಮಾಡಕ್ಕೆ ಅವನಿಗೆಲ್ಲಿ ಧೈರ್ಯವಿದೆ! ಬೇಕೂಂತ ಆಡ್ತಿದ್ದಾನೆ ಅಂತ ನಿನಗೆ ಅಷ್ಟೂ ತಿಳಿಯಬೇಡವೆ!"

"ಚೆನ್ನಾಗಿದೆ ಈ ಕಣ್ಣಾಮುಚ್ಚಾಲೆ ಆಟ"

"ನೋಡೋಣ ಯಾರು ಗೆಲ್ತಾರೆ ಅಂತ?"

"ಎಲ್ಲರೂ ಗೆದ್ದಿರಿ. ನಾನು ಸೋತೆ ಅಷ್ಟೆ"

"ಅಮ್ಮ ನಿಜ ಹೇಳು. ನಿನಗೆ ಖಂಡಿತಾ ಇಷ್ಟವಿರಲಿಲ್ಲವೆ? ಯಾರ ಬಲವಂತಕ್ಕೆ ಹೀಗೆ ಮಾಡಿದೆ?"

"ಒಬ್ಬೊಬ್ಬರು ಒಂದೊಂದು ತರಹ ಆಡ್ತಿದ್ರಿ. ನನಗೂ ಕೆಲವು ಆಸೆಗಳಿರಲ್ವೆ? ನಮ್ಮ ಜನ ಅಲ್ಲ. ನಮಗೆ ಸಮಾನರಲ್ಲ. ಜಾತಕ ನೋಡಲಿಲ್ಲ. ಗೋತ್ರ ನಕ್ಷತ್ರ ಗೊತ್ತಿಲ್ಲ. ಇದನ್ನೆಲ್ಲ ನಾನು ಒಪ್ಪಬೇಕಾದ ಪರಿಸ್ಥಿತಿಗೆ ತಳ್ಳಿದಿರಲ್ಲ ಎಲ್ಲ ಸೇರಿ... ಸರೀನಾ?"

"ಸಾರಿ ಕಣಮ್ಮ.... ಏನೋ, ನನಗೆ ಆಸೆ ಇತ್ತು. ಬಯಕೆಯ ನೆವತೋರಿ, ಭಾಷೆ ತೆಗೆದುಕೊಂಡೆ. ನಿನ್ನ ಮನಸ್ನಲ್ಲಿ ಇದಲ್ಲಾ ಇದೆ ಅಂತ ನನಗೆ ಗೊತ್ತಿರಲಿಲ್ಲ. ಎಂತೆಂತಹದಕ್ಕೋ ಶಾಂತಿ ಮಾಡ್ತಾರಂತೆ. ಜಾತಕ, ಗೋತ್ರ, ನಕ್ಷತ್ರ... ಎಲ್ಲಾ ಸರಿ ಹೋಗುವಂತಹ ಒಂದು ಶಾಂತಿ ಹೋಮ ಮಾಡಿಸಿಬಿಟ್ಟರೇ?"

"ನೀನು ಶಾಂತಿ ಅನ್ನುತ್ತು ನೆನಪಿಗೆ ಬಂದಿತು. ಈ ವರ್ಷ ನಿಮ್ಮಪ್ಪನಿಗೆ ಅರವತ್ತು ವರ್ಷ ತುಂಬುತ್ತೆ. ತುಂಬುವ ಮೊದಲು ಶಾಂತಿ ಮಾಡಿಸಬೇಕು. ಮಕ್ಕಳು ನಿಂತು ಮಾಡಬೇಕಾದ ಕೆಲಸ ಅದು. ಮೋಹನನಿಗೆ ಹೇಳು"

"ಇನ್ನುಮೇಲೆ ಇಂತಹ ಕೆಲಸವನ್ನೆಲ್ಲ ಮಧುರಂಗೆ ಹೇಳು. ಅವಳು ನನಗಿಂತ ಚೆನ್ನಾಗಿ ನಿಭಾಯಿಸ್ತಾಳೆ."

"ಹುಂ. ಇನ್ನು ಮೇಲೆ ಅವಳ ಕೈ ಕಾಲು ಕಟ್ಟಬೇಕು ಎಲ್ಲಾದಕ್ಕೂ....."

ಮಾಲತಿಗೆ ನಗು ಬಂತು. ನಕ್ಕರೆ ತಾಯಿಗೆ ಸಿಟ್ಟು ಬರುತ್ತದೆಂದು ಗೊತ್ತಾದ್ದರಿಂದ ತಡೆದುಕೊಂಡಳು. ಮೋಹನನಂತೂ ಅತಿ ಗಾಂಭೀರ್ಯ ನಟಿಸುತ್ತಿದ್ದ. ಮನೋಹರ ಬಂದರೆ ಸಾಕೆಂದು ಕಾತರದಿಂದ ನಿರೀಕ್ಷಿಸಿದಳು

ಮಾಲತಿ.

ಮನೋಹರ ಮೊದಲು ತಂದೆ ತಾಯಿಯರನ್ನು ಭೇಟಿಯಾಗಿ ನಂತರ ಮಾಲತಿಯನ್ನು ನೋಡಲು ಬಂದ. ಬಿಳಿಚಿಕೊಂಡಿದ್ದಂತಿದ್ದವಳನ್ನು ಆತಂಕದಿಂದ ಪ್ರಶ್ನಿಸಿದ.

"ತಾಯಿ ಮನೆಗೆ ಬಂದರೆ ಸರಿ ಹೋಗ್ತೀನಿ ಅಂತ ಓಡಿಬಂದೆ. ಈಗ ನೋಡಿದರೆ ಅಲ್ಲಿದ್ದುದಕ್ಕಿಂತ ವೀಕ್ ಆಗಿದೀಯಲ್ಲೇ... ಮದುವೆ ಓಡಾಟವೆಲ್ಲಾ ನಿನ್ನದೇನಾ!"

"ಮೆಲ್ಲಗೆ, ಅಮ್ಮಂಗೆ ಕೇಳಿಸೀತು"

"ಸರಿ, ಇಲ್ಲಿ ಜೋರಾಗಿ ಒಂದು ಮಾತನಾಡುವಂತೆಯೂ ಇಲ್ಲ. ನಡೀ ನಮ್ಮ ಮನೆಗೆ."

"ಇನ್ನು ನಾಲ್ಲು ದಿನ, ಮದುವೆ ಮುಗೀಲಿ ಅಲ್ಲಿಗೇ ಬರ್ತೀನಿ"

"ತಿಂಗಳಿಂದ ಮಾತನಾಡದೇ ಬೇಜಾರಾಗ್ತಿದೆ. ಇವತ್ತು ಬಾ. ನಾಳೆ ಮತ್ತೆ ಬರುವಂತೆ"

ಗಂಡನ ಆಹ್ವಾನವನ್ನು ತಿರಸ್ಕರಿಸಲಿಚ್ಛಿಸದೇ ಹೊರಟಳು. ಅಳಿಯ ಮಗಳನ್ನು ಕರೆದುಕೊಂಡು ಹೋಗ್ತೀನಿ ಎಂದಾಗ ಬೇಡವೆನ್ನಲಿಲ್ಲ ಭವಾನಮ್ಮ

ಮಾರನೇ ದಿನ ಸಣ್ಣ ಸಮಾರಂಭ. ಬರೀ ಮನೆಯ ಮಟ್ಟಿಗೆ. ಅಳಿಯನ ಮನೆಯವರು ಬಂದಿದ್ದರು. ಲಕ್ಷಣವಾಗಿ ಕಲಾಪತ್ತಿನ ಪಂಚೆ ಉಟ್ಟು ತಿರುಗುತ್ತಿದ್ದ ಮೋಹನನನ್ನು ನೋಡಿ ಮನೋಹರ ಹೆಂಡತಿಯೊಡನೆ ಹೇಳಿದ, "ಎಷ್ಟು ಕಳೆ ಬಂದಿದೆ. ಮದುಮಗನನ್ನು ನೋಡಿದರೆ, ನನಗೂ ಇನ್ನೊಂದು ಮದುವೆ ಮಾಡಿಕೊಳ್ಳೋಣ ಅಂತನ್ನಿಸ್ತಿದೆ"

"ಒಂದು ತಿಂಗಳು ದೂರವಿದ್ದ ಮಾತ್ರಕ್ಕೆ ನಾನು ಇನ್ನೂ ಡೈವೋರ್ಸ್ ಕೊಟ್ಟಿಲ್ಲ ನಿಮಗೆ. ನೆನಪಿರಲಿ" ಎನ್ನುತ್ತಾ ಗಂಡನ ಬೆನ್ನ ಮೇಲೆ ಗುದ್ದಿದಳು. ಭವಾನಮ್ಮನಿಗೆ ಅದೆಲ್ಲ ವಿಚಿತ್ರವಾಗಿ ತೋರಿತು. ನಾಳೆ ಮಧುರಳೂ, ತನ್ನ ಮಗನೊಡನೆ ಹೀಗೆ ವರ್ತಿಸಿದರೇ? ಅಂತ ಎನಿಸಿದ ತಕ್ಷಣ ಮುಖದ ಕಳೆಯೇ ಬದಲಾಯಿಸಿತು. ತಾನು ಮಗನನ್ನು ಕಳೆದುಕೊಳ್ಳುತ್ತಿದ್ದೇನೇನೋ ಅಂತನ್ನಿಸಿತ್ತು. ಮಾಲತಿಯನ್ನು ಕರೆದು ತಿಳುವಳಿಕೆ ಹೇಳಬೇಕೆಂದುಕೊಂಡಳು. ಮಾಲತಿ ಗಂಡನ ಜತೆ ಜತೆಯಲ್ಲಿಯೇ ಇದ್ದಳು.

ಮಾರನೆಯ ದಿನ, ಸಾವಕಾಶವಾಗಿ ಮದುವೆಯ ಮಿನಿಛತ್ರಕ್ಕೆ ಹೋದರು. ಮೊದಲು ತಿಂಡಿ ಕಾಫಿ ಆಯಿತು. ಹೆಣ್ಣಿನ ಮನೆಯವರು ಅದೇ ತಾನೇ

ಬಂದಿದ್ದರು. ಅವರುಗಳು ಎಂದೋ ನೆಂಟರಿಷ್ಟರಿಂದ ದೂರ ಬಂದುದರಿಂದ, ಕೆಲವು ಸ್ನೇಹಿತರುಗಳು ಮಾತ್ರ ಬಂದಿದ್ದರು. ರಾಗಿಣಿ,ತನ್ನ ಸ್ನೇಹಿತೆಯರನ್ನು ಆಹ್ವಾನಿಸಿದ್ದಳು. ಅದರಲ್ಲಿ ಆ ಹುಡುಗ, ಅರುಣನೂ ಇದ್ದ.

ಅವನನ್ನು ಕಂಡು, ಮೋಹನನ ಹುಬ್ಬುಗಳು ಸಂಕುಚಿತಗೊಂಡವು. ಮಾಲತಿಯನ್ನು ಕರೆದು ತೋರಿಸಿದ, "ನೋಡು ಇವನೇ ರಾಗಿಣಿಯ ಬಾಯ್‌ಫ್ರೆಂಡ್." ಆದಿನ ಇವನ ಜೊತೆಯೇ ಮಾತನಾಡುತ್ತಾ ನಿಂತಿದ್ದುದು. ನೋಡು, ಅವನನ್ನು ಮದುವೆಗೆ ಕರೆದಿದ್ದಾಳೆ. ಎಷ್ಟು ಧೈರ್ಯ ಇವಳಿಗೆ?

"ಹೋಗಲಿ ಬಿಡು ಮೋಹನ. ಆಮೇಲೆ ತಿಳುವಳಿಕೆ ಹೇಳಿದರಾಯ್ತು." ಆ ಹುಡುಗ, ರಾಗಿಣಿಯ ಜೊತೆ ಜೊತೆಯಲ್ಲಿ ತನಗೆ ತೋರಿದ ಅವರಿವರು ಹೇಳಿದ ಕೆಲಸಗಳನ್ನು ನಿಭಾಯಿಸುತಿದ್ದ. ಒಂದು ಗಳಿಗೆ ಅವನ ಮನಸ್ಸು ಏನೇನನ್ನೋ ಆಲೋಚಿಸಿತು. ಈಗಲೇ ರಾಗಿಣಿ ವರನನ್ನು ಗೊತ್ತು ಮಾಡಿಟ್ಟುಕೊಂಡಿರಬಹುದು ಎಂದು ಕೊಂಡ.

ಅವನ ಸಂದೇಹವನ್ನು ನಿವಾರಿಸುವವಳಂತೆ, ರಾಗಿಣಿ, ಅವನನ್ನು ಕರೆದುಕೊಂಡು ಬಂದು ಪರಿಚಯಿಸಿದಳು.

"ಇವರು ನನ್ನ ಭಾವ, ಮೋಹನ್.... ಇವನು ನನ್ನ ಫ್ರೆಂಡ್, ಅರುಣ್ ಅಂತ. 'ರಾಖಿ' ಕಟ್ಟಿ ಇವನನ್ನು ನನ್ನ ಅಣ್ಣನನ್ನಾಗಿ ಮಾಡಿಕೊಂಡಿದ್ದೇನೆ"

ಮೋಹನ ಚಕಿತನಾದ.'ಆಂ' ಎಂದ.

"ನಾವು ಹುಡುಗಿಯರೆಲ್ಲ, ಒಟ್ಟಾಗಿ, ನಮ್ಮ ಕ್ಲಾಸಿನ ಹುಡುಗರಿಗೆ, 'ರಾಖಿ' ಹಬ್ಬದ ದಿನ ರಾಖಿ ಕಟ್ಟುತ್ತೀವಿ. ನಾವು ಸೋದರ ಸೋದರಿಯರಂತೆ ಒಬ್ಬರಿಗೊಬ್ಬರು ಸಹಾಯ ಮಾಡುತ್ತೇವೆ"

'ವೆರಿಗುಡ್' ಎಂದ ತನಗರಿವಿಲ್ಲದೇ, ತನ್ನ ಕೆಟ್ಟ ಆಲೋಚನೆಗಳಿಗೆ ಹೀನಾಯವೆನಿಸಿತ್ತು. ರಾಖಿ ಹಬ್ಬದ ಸಾಮೂಹಿಕ ಆಚರಣೆ ಒಂದು ಆದರ್ಶವಾದ ಸಂಪ್ರದಾಯ ಎಂದುಕೊಂಡ.

ಆಗ ಇದ್ದಕ್ಕಿದ್ದಂತೆ ಶೇಷಾದ್ರಿ ತಿಳಿಸಿದ್ದ ಅವರ ಮಗನ ವಿಷಯ ನೆನಪಿಗೆ ಬಂತು. ಅಂಗವಿಕಲರ ಸಂಸ್ಥೆಯಲ್ಲಿ, ಬುದ್ದಿಮಾಂದ್ಯರ ಮಧ್ಯೆ ಶೂನ್ಯವನ್ನು ನೋಡುತ್ತಾ ಕೂತಿರುವ ಒಬ್ಬ ಹುಡುಗನ ಚಿತ್ರವನ್ನು ಚಿತ್ರಿಸಿಕೊಂಡ. ವ್ಯಥೆ ಆಯಿತು. ರಾಗಿಣಿಯ ಬಗ್ಗೆ ಅಭಿಮಾನ ಮೂಡಿತು...... ವಿಶ್ವಾಸದಿಂದ ಅವಳ ಕೆನ್ನೆ ತಟ್ಟಿದ.

ಯಾವ ಪದ್ದತಿಯ ಪ್ರಕಾರ ಲಗ್ನವನ್ನು ಮಾಡಿಸಬೇಕೆಂಬ ಜಿಜ್ಞಾಸೆಗೆ

ಅವಕಾಶ ಕೊಡದೇ ಮುಖ್ಯವಾದ ಕೆಲವು ಶಾಸ್ತ್ರಗಳನ್ನು ನೆರವೇರಿಸಿ, ಮೋಹನ-ಮಧುರ ದಂಪತಿಗಳಾದರೆಂದು ಸಾರಿದರು. ಹಿರಿಯರು ಆಶೀರ್ವದಿಸಿದರು. ಉಳಿದವರು ಶುಭಹಾರೈಸಿದರು. ಊಟ, ಉಡುಗೊರೆಗಳ ಸಂಭ್ರಮ ಮುಗಿಯಿತು. ಎಲ್ಲರೂ ಆರಾಮವಾಗಿ ಕುಳಿತರು. ಕೆಲವು ಆಹ್ವಾನಿತರು ಹೊರಟುಹೋದರು. ಉಳಿದ ಸಮಯ ಮಾತುಕತೆ, ಬಿಸಿ ಕಾಫಿಗಳ ನಡುವೆ ಕಳೆದುಹೋಯಿತು.

ಇಬ್ಬರ ಮನೆಯವರಿಗೂ, ರಾತ್ರಿಯ ಊಟ ಅಲ್ಲೇ. ನಂತರ ಎಲ್ಲರೂ ಮೋಹನನ ಮನೆಗೆ ಬಂದರು. ಮಗಳನ್ನು ಒಪ್ಪಿಸಿ ಕೊಡುವ ಕಾರ್ಯ ಕಠಿಣವಾಗಿ ತೋರಿತು. ಶೇಷಾದ್ರಿಯೇ ಮಗಳನ್ನು ಒಪ್ಪಿಸಿ ಕೊಡುವಾಗ ಬಿಕ್ಕಿ ಬಿಕ್ಕಿ ಅತ್ತರು. ವೈದೇಹಿ ಮಾತ್ರ "ಮಗಳು ಅತ್ತೆಮನೆಯಲ್ಲಿ ಹೇಗಿರಬೇಕು ಎನ್ನುವುದನ್ನುನಾನು ತಿಳಿಸಿ ಕೊಟ್ಟಿಲ್ಲ. ನಿಮ್ಮನ್ನು ಅನುಸರಿಸಿಕೊಂಡು ಹೋಗುವ ತಿಳುವಳಿಕೆ ಅವಳಿಗಿದೆ. ನೀವು ಅವಳನ್ನು ಮಾಲತಿಯಷ್ಟೇ ಚೆನ್ನಾಗಿ ನೋಡಿಕೊಳ್ತೀರಿ ಎಂಬ ನಂಬಿಕೆ ನನಗಿದೆ" ಎಂದರು.

ಆಕೆ ಎಂದೂ ಇಷ್ಟು ಮಾತನ್ನಾಡಿರಲಿಲ್ಲ. ಭವಾನಮ್ಮನಿಗೇ ದುಃಖ ಒತ್ತರಿಸಿಬಂತು. "ನೀವು ಚಿಂತಿಸಬೇಡಿ. ಅವಳಿಗೆ ಯಾವ ತೊಂದರೆಯೂ ಉಂಟಾಗುವುದಿಲ್ಲ. ಮೋಹನ ತುಂಬಾ ಒಳ್ಳೆಯವನು. ಹೆಂಚತಿಯನ್ನು ಹೆಚ್ಚಾಗಿ ಪ್ರೀತಿಸುತ್ತಾನೆ. ಸರಿ ಇವರಂತೂ, ಮಾಲತಿಯನ್ನು ಕಳಿಸಿಕೊಟ್ಟು ಆ ಜಾಗ ಖಾಲಿಯಾಗಿದೆಯೆಂದು ಕೊರಗುತ್ತಿದ್ದರು. ಇನ್ನು ಯಾವುದಕ್ಕೂ ಅವಳೇ...." ಮಾತಿನಲ್ಲಿ ಜಾಣತನ ತೋರಿಸಿದ್ದರು. ತಾನು ಯಾವ ತರಹ ಎಂಬುದರ ಬಗ್ಗೆ ಏನೂ ಹೇಳಿರಲಿಲ್ಲ.

ಮಧುರಳನ್ನು ಗಂಡನ ಮನೆಯಲ್ಲಿ ಬಿಟ್ಟು ಅವರುಗಳು ಹೊರಟುಹೋದರು. ಮಾಲತಿ, ಗಂಡನ ಜತೆ ತನ್ನ ಅತ್ತೆ ಮನೆಗೆ ಹೊರಟಳು. ಹೊರಡುವ ಮೊದಲು, ಮಧುರಳ ಕಿವಿಯಲ್ಲಿ ಏನೋ ಹೇಳಿ, ಕಿಸಕ್ಕನೆ ನಕ್ಕಿದ್ದಳು. ಮಧುರ ಗಂಭೀರಳಾಗಿದ್ದಳು. ಬೆಳಗಿನಿಂದ ಮೋಹನ ಅಗತ್ಯಕ್ಕಿಂತ ಹೆಚ್ಚಿನ ಮಾತನ್ನು ಆಡಿರಲಿಲ್ಲ. ಈಗ ಎಲ್ಲರೂ ಹೊರಟುಹೋದರು. ಒಂಟಿಯಾಗಿ ಅವನ ಕೈಗೆ ಸಿಕ್ಕಿ ಹಾಕಿಕೊಳ್ಳುವ ಸಮಯ ಬಂದಿದೆ. ಏನಪ್ಪಾಗತಿ ಎಂದು ಚಿಂತಿಸಿ, ಮಾಲತಿಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಿದಳು.

"ಮಾಲತಿ ಪ್ಲೀಸ್, ಇವತ್ತು ಒಂದು ದಿನ ನನಗೋಸ್ಕರ ಇಲ್ಲಿರ್ತೀಯಾ?"

"ನಾನೇಕೆ! ನಿನ್ನ ಜತೆಗೆ ಮೋಹನ ಇದಾನಲ್ಲೇ"

"ನೀನು ಏನೂ ತಿಳಿದುಕೊಳ್ಳಲ್ಲ ಎಂದರೆ, ನಾನು ಇವತ್ತು ನಿನ್ನ ಜತೆ ಮಲಗ್ಲಾ?"

"ತಥ್, ಹೆದರಿಕೆಯೋ, ನಾಚಿಕೆಯೋ ಏನು? ಏನಾಗಲಿ ಅವನು ನಿನ್ನ ಗಂಡ... ನಾನು ನನ್ನ ಮದುವೆಯ ರಾತ್ರಿ ಹೀಗಾಡಿರಲಿಲ್ಲ. ಬೇಕಾದರೆ ಮನೋಹರನನ್ನು ಕೇಳು"

"ಷ್. ನೀನೊಬ್ಬಳು.... ಹಾಗಾದರೆ ಮೋಹನನನ್ನು ಕರೆದು ಹೇಳು, ಯಾವುದೇ ಕಾರಣಕ್ಕೂ ನನ್ನನ್ನು ಮಾತ್ರ ಬೈಯಬಾರದು ಅಂತಾ...."

"ಯಾಕೇ ಬೈತಾನೇ. ಪ್ರೀತಿ ಮಾಡ್ತಾನೆ. ಪ್ರೀತೀನ, ಸುಮ್ಮನೇ ಹೋಗು"

"ಒಂಟಿಯಾಗಿ ಸಿಕ್ತೀಯಲ್ಲ ಆಗ ನೋಡ್ತಿರು.... ಅಂತ ಅವತ್ತು ಹೆದರಿಸಿದ್ದರಲ್ಲೇ. ನನಗೆ ಹೆದರಿಕೆ ಆಗ್ತಿದೆ. ಏನೇನು ಕೇಳ್ತಾರೋ, ನಿಮ್ಮ ಅಮ್ಮನ್ನ ನಾನೇ ಬಲವಂತ ಮಾಡಿ ಒಪ್ಪಿಸಿದೀನಿ ಅಂತ ಅಂದುಕೊಂಡರೇ?"

"ಅಯ್ಯೋ ಹೋಗೇ.... ಇವತ್ತಿನ ತನಕ ಅದನ್ನೆಲ್ಲ ಯಾರು ನೆನಪಿನಲ್ಲಿಟ್ಟು ಕೊಂಡಿರ್ತಾರೆ. ನೀನು ಬಂದರೆ ಸಾಕು ಅಂತ ಕಾಯ್ತಿರ್ತಾನೆ." ಹೋಗು ಮೊದಲು ಮಧುರ ಅನುಮಾನಿಸುತ್ತಾ ಅಲ್ಲೇ ನಿಂತಿದ್ದಳು.

ಸ್ಕೂಟರ್ ಸ್ಟಾರ್ಟ್ ಆಗದೇ ಇದ್ದುದರಿಂದ, ಮನೋಹರ ಆಟೋ ತರ್ತೀನಿ ಅಂತ ಹೊರಟಾಗ, ತಂದೆ ತಡೆದರು.

"ಇಷ್ಟು ಹೊತ್ನಲ್ಲಿ ಅಲ್ಲಿಯ ತನಕ ಆಟೋದಲ್ಲಿ ಬೇಡ. ನಿಮ್ಮ ಮನೆ ಹತ್ತಿರ ಜನ ಸಂಚಾರವೂ ಕಡಿಮೆ. ಈ ರಾತ್ರಿ ಇಲ್ಲಿಯೇ ಇದ್ದು ಬೆಳಗ್ಗೆ ಹೋಗೋರಂತೆ. ಈ ನೆವದಲ್ಲಿ ಒಂದು ದಿನವಾದರೂ ನಮ್ಮ ಮನೆಯಲ್ಲಿದ್ದ ಹಾಗಾಗುತ್ತೆ"

ಮಾಲತಿ ಉಸ್ ಎಂದು ಬಂದು ಕುತಿತಳು. ಮಧುರ ನಗುತ್ತಾ ತಾನೂ ಅವಳ ಬಳಿ ಕುಳಿತಳು. ಮನೋಹರ ಮಾಲತಿಯನ್ನು ಕರೆದ.

"ನೀನು ಕೂತಿದ್ದರೆ ಅವರೂ ಕೂತಿರ್ತಾರೆ. ನೀನು ಸುಮ್ಮನೆ ಬಾ" ಅಂತ. ತಂದೆ, ತಾಯಿ ತಮ್ಮಪಾಡಿಗೆ ತಾವು ಮಲಗಲು ಸಿದ್ಧರಾಗಿದ್ದರು.

"ನನಗೆ ನಿದ್ದೆ ಬರ್ತಿದೆ. ನಾನು ಮಲಗ್ತೀನಿ" ಎನ್ನುತ್ತಾ ಮಾಲತಿ ತನ್ನ ರೂಮಿಗೆ ಹೊರಟಳು. ಗೆಳತಿಯ ಕಡೆನೋಡಿ ನಸುನಕ್ಕಳು. ಮನೋಹರ ಅವಳನ್ನನುಸರಿಸಿದ. ನಿಧಾನವಾಗಿ ಬಾಗಿಲನ್ನು ಹಾಕಿಕೊಂಡ. ಅಲ್ಲೇ ಕೂತಿದ್ದವಳಿಗೆ ಒಂದು ತರಹ ಮುಜುಗರವೆನಿಸಿತ್ತು. 'ಅವರಾದ್ರೂ ಸರಿ, ತನ್ನನ್ನು ಬಂದು ಕರೆಯಬೇಡವೇ, ತಾನೇ ಹೇಗೆ ಹೋಗುವುದು' ಎನಿಸಿದಾಗ, ಅಳು

ಬರುವಂತಾಯ್ತು. ದುಃಖ ಹೆಚ್ಚಾದಾಗ ತಡೆಯಲಾಗದೇ ಬಿಕ್ಕಿ ಬಿಕ್ಕಿ ಅತ್ತಳು. ಅವಳ ಅಳುವಿನ ಸೊರ ಸೊರ ಸದ್ದನ್ನು ಕೇಳಿ, ಮೋಹನ ರೂಮಿನಿಂದ ಆಚೆ ಬಂದ. ಹಾಲಿನಲ್ಲಿ ಒಬ್ಬಳೇ ಕೂತಿದ್ದನ್ನು ಕಂಡ. "ಮಾಲತಿ ಎಲ್ಲಿ? ಇದೇನು ಒಬ್ಬಳೇ ಕೂತಿದೀಯಾ... ಎಲ್ಲರೂ ಎಲ್ಲಿ!" ಕೇಳಿದ. ಅವಳು ಉತ್ತರಿಸಲಿಲ್ಲ. ಅತ್ತಿತ್ತ ನೋಡಿ ಕೇಳಿದ, "ನೀನೇ ಬರ್ತೀಯೋ ಅಥವಾ ಎತ್ಕೊಂಡು ಹೋಗಲೋ?" ಅವನಿಗೆ ಕಾಣದಂತೆ ಕಣ್ಣೀರನ್ನೂ ಒರೆಸಿಕೊಂಡು ಹೆದರಿ ಎದ್ದು ನಿಂತಳು. ಅವನ ಹಿಂದೆಯೇ ರೂಮನ್ನು ಹೊಕ್ಕಳು. ನೀಟಾಗಿ ಹಾಸಿದ್ದ ಅವನ ಮಂಚದ ಮೇಲಿನ ಹಾಸಿಗೆಯ ಮೇಲೆ ಕೂತ. ಅವಳನ್ನು ಕರೆದ. 'ಕೂತ್ಕೋ' ಎಂದ. ಅವಳು ಕೂತಳು. ಅವಳನ್ನೇ ನೋಡುತ್ತಾ ನುಡಿದ.

"ನೀನು ಈಗ ನಾನು ಹೇಳಿದ ಹಾಗೆ ಕೇಳಿದರೆ, ನಾನು ನಿನ್ನ ತಪ್ಪನ್ನೆಲ್ಲಾ ಮನ್ನಿಸಿಬಿಡ್ತೀನಿ"

"ನಾನೇನು ತಪ್ಪುಮಾಡಿಲ್ಲ" ಹೆದರುತ್ತಾ ನುಡಿದಳು.

"ಯಾಕೆ ಮಾಡಿಲ್ಲ! ಎಷ್ಟು ತರಹ ಸತಾಯಿಸಿದೀಯ.... ಈಗ ನೀನೊಂದು ಹಾಡು ಹೇಳಿದರೆ, ನಾನು ನಿನ್ನನ್ನು ಕ್ಷಮಿಸ್ತೀನಿ"

"ನೀವು ಕ್ಷಮಿಸುವಂತಹ ತಪ್ಪನ್ನೇನೂ ಮಾಡಿಲ್ಲ. ನಾನೇಕೆ ಹಾಡಬೇಕು...? ನೀವೂ ನನ್ನನ್ನು ಬೇಕಾದಷ್ಟು ಸತಾಯಿಸಿದೀರಿ"

"ಈಗೇನು ಹೇಳ್ತೀಯೋ ಇಲ್ಲವೋ.... ಇಲ್ಲದಿದ್ದರೆ, ನಾನು ನೀನೂ ದೂರದೂರವೇ...."

"ಸರಿ. ನಿಮ್ಮಿಷ್ಟ" ಎಂದು ಎದ್ದಳು.

"ಎಲ್ಲಿಗೆ ಹೊರಟೆ ಕೂತ್ಕೋ" ಎಂದು ಕೈ ಹಿಡಿದೆಳೆದ ರಭಸಕ್ಕೆ ಅವಳು ಅವನಿಗೆ ತಾಗಿದಂತೆ ಬಿದ್ದಳು. ಸಾವರಿಸಿಕೊಂಡು ಕೂತಳು.

"ಒಂದೇ ಒಂದು ಹಾಡು ಹೇಳು ಪ್ಲೀಸ್" ಎಂದ.

"ಯಾಕಿಂತ ಹಠ? ಇಷ್ಟು ಹೊತ್ನಲ್ಲಿ ಹಾಡಿದರೆ ಹೊರಗಿರುವವರು ನಗುವುದಿಲ್ಲವೆ?"

"ಅವರ್‍ಯಾರಿಗೂ ಕೇಳಿಸದಂತೆ, ನನ್ನ ಕಿವಿಗೆ ಮಾತ್ರ ಕೇಳುವಂತೆ ಹೇಳು"

"ಹಾಗಾದರೆ ಒಂದೇ ಒಂದು. ಇನ್ನೊಂದು ಮತ್ತೊಂದು ಅಂತ ಕೇಳಬಾರದು. ಒಂದೇ ಒಂದು. ಅದೇ ಮೊದಲು ಅದೇ ಕಡೇ."

"ಆಹಾಹಾ. ನೀನು ಬಹಳ ಜಾಣೆ. ರಾಗಿಣಿಯ ತರಹ ಮಂಗಳ

ಗೀತೆಯನ್ನೇ ಮೊದಲು ಹಾಡಕ್ಕೆ ನೋಡ್ತೀಯಲ್ಲ. ಇನ್ನೂ ಕಾರ್ಯಕ್ರಮ ಶುರುವೇ ಆಗಿಲ್ಲ. ಕಾರ್ಯಕ್ರಮಕ್ಕೆ ಈಗಲೇ ಮಂಗಳ ಹಾಡಬೇಡ"

ಮಧುರ ಮನಃಪೂರ್ವಕವಾಗಿ ನಕ್ಕಳು.

"ಬರೀ ನಕ್ಕರೆ ಸಾಲದು. ಬೇಗ ಹಾಡಿಬಿಡು. ಹೊತ್ತಾಯ್ತು ಮಲಗೋಣ"

"ಹಾಡಲೇ ಬೇಕಾ? ಅದೂ ಇವತ್ತು. ಇನ್ನೊಂದು ದಿನ ಹೇಳಿದರೆ ಆಗದಾ?"

"ಹುಹು. ನೀನು ನನ್ನನ್ನು ಸತಾಯಿಸಿದ್ದೆ ಅಲ್ಲವೇ, ಅದಕ್ಕೆ ಪ್ರತೀಕಾರ. ನೀನು ಹಾಡದ ಹೊರತು, ನಿನಗೆ ನನ್ನ ಪ್ರೀತಿ ಸಿಗುವುದಿಲ್ಲ. ಮದುವೆಯಾಗಿಯೂ ಬ್ರಹ್ಮಚಾರಿಣಿ ತರಹ ಇರಬೇಕಾಗುತ್ತದೆ. ಆಗ ನಿನಗೇ ನಷ್ಟ"

ಇದೆಂತಹ ಪೀಕಲಾಟ ಎಂದುಕೊಂಡು, "ನೀವು ಒಳ್ಳೆಯವರು ಅಂತ ಅಂದ್ಕೊಂಡಿದ್ದೆ. ಹೀಗೆ ಗೋಳು ಹುಯ್ದುಕೊಳ್ತೀರಿ ಅಂತ ತಿಳಿದುಕೊಂಡಿರಲಿಲ್ಲ"

"ಇನ್ನೂ, ಇವತ್ತು ನಮ್ಮ ಮನೆಗೆ ಬರುತ್ತಾ ಇದೀಯ, ನನ್ನ ಒಳ್ಳೆತನ ಕೆಟ್ಟತನ ನಿನಗೇನು ಗೊತ್ತು! ಈಗ ನೀನು, ನಾನು ಹೇಳಿದ ಹಾಗೆ ಕೇಳಿದರೆ, ಇಡೀ ಜೀವಮಾನವೆಲ್ಲಾ ನಾನು ನೀನು ಹೇಳಿದ ಹಾಗೆ ಕೇಳ್ತೀನಿ"

"ನಿಜವಾಗಿಯೂ? ಪ್ರಾಮಿಸ್!"

"ಪ್ರಾಮಿಸ್...."

ಮಧುರ ಕೆಮ್ಮಿ ಗಂಟಲನ್ನು ಸರಿಪಡಿಸಿಕೊಂಡಳು. ತಂಬೂರಿ ಎಲ್ಲಿ? ಕೇಳಿದಳು.

"ತಾಳ, ತಂಬೂರಿ ಯಾವುದೂ ಬೇಡ. ಸುಮ್ಮನೇ ಹಾಡು" ಸಿಡುಕಿದ.

"ಲಾಲಿ ಹಾಡಲಾ!" ತಮಾಷೆ ಮಾಡಿದಳು.

"ಲಾಲಿ ಹಾಡಿದರೆ ನಾನು ಮಲಗಿ ಬಿಡ್ತೀನಿ.... ಆಮೇಲೆ ನಾನು ಬೆಳಿಗ್ಗೇನೇ ಏಳೋದು.... ಲಾಲಿ ಬೇಡ...." ತಾನೂ ನಕ್ಕ.

ಮಧುರ ನಗುತ್ತಾ ಶುರುಮಾಡಿದಳು, ಕೆಳದನಿಯಲ್ಲಿ.

"ತನು ಮನಧನವೆಲ್ಲ ನಿನ್ನದು ಈಗ.... ನೀನೇ ನನ್ನ ವಿಧಾತಾ...."

"ಏಯ್ ಏಯ್.... ಇದ್ಯಾವ ಹಾಡೇ? ಒಳ್ಳೆ ಜನ ಗಣ ಮನ.... ಇದ್ದಹಾಗಿದೆ. ಸದ್ಯ ರಾಗಿಣಿಯ ತರಹ ರಾಷ್ಟ್ರಗೀತೆ ಹಾಡಲಿಲ್ಲವಲ್ಲ. ನಾನು ಎದ್ದು ನಿಂತು ಸೆಲ್ಯೂಟ್ ಹೊಡೆದು, ಕಾರ್ಯಕ್ರಮ ಶುರುವಾಗುವ ಮೊದಲೇ ಮುಕ್ತಾಯ ಹಾಡಬೇಕಾಗಿತ್ತು.

ಮಧುರ ನಕ್ಕಾಗ, "ನಗ್ತೀಯ ತಡೀ ಮಾಡ್ತೀನಿ" ಎಂದು ಹತ್ತಿರ

ಬಂದ. ಮಧುರ ಹೆದರಿ ಕಿರುಚಿದಳು.

ಮಾಲತಿ ರೂಮಿನ ಬಾಗಿಲ ಹತ್ತಿರ ನಿಂತು, ಬಾಗಿಲು ತಟ್ಟಿದಳು. "ಅದೆಷ್ಟು ಮಾತನಾಡ್ತಿದೀರಿ? ಅದೇನು ಕಿರುಚಾಟ? ಮಲಗಬಾರದಾ! ನಮಗೆ ಡಿಸ್ಟರ್ಬ್ ಆಗ್ತಿದೆ" ಎಂದಳು.

ಮೋಹನ ಪೆಚ್ಚಾದ. "ಬೆಳಿಗ್ಗೆ ವಿಚಾರಿಸಿಕೊಳ್ತೀನಿ ನಿನ್ನನ್ನು" ಎಂದು ಮಾಲತಿಗೆ ಕೇಳುವಂತೆ ಹೇಳಿ ಮಧುರಳ ಕಡೆ ತಿರುಗಿದ. "ನೋಡಿದ್ಯಾ ನಿನ್ನಿಂದಲೇ ಇಷ್ಟು" ಎಂದ.

"ನಾನೇನು ಮಾಡಿದೆ?" ನಗುತ್ತಾ ಪ್ರಶ್ನಿಸಿದಳು.

"ಇಲ್ಲಿ ಬಾ ಹತ್ತಿರ ಹೇಳ್ತೀನಿ...." ಎಂದ. ಹತ್ತಿರ ಬಂದಳು. "ಇನ್ನೂ ಹತ್ತಿರ" ಎಂದ. ಹತ್ತಿರಕ್ಕೆ ಬಂದವಳನ್ನು ತನ್ನೆಡೆಗೆ ಎಳೆದುಕೊಂಡು, 'ಅಮರಾ ಮಧುರಾ ಪ್ರೇಮ ನೀ ಬಾ ಬೇಗ ಚಂದಮಾಮ' ಎಂದ ಅವಳ ಕಿವಿಯ ಬಳಿ ರಾಗವಾಗಿ. ಅವರ ಪ್ರೇಮ, ಮಧುರ ಪ್ರೇಮವಾಗಿ ನಲಿಯಿತು. ಮೋಹನನ ಪ್ರೀತಿಯ ಹೊಳೆಯಲ್ಲಿ ಮಧುರ ನೀರಾಗಿ ಸೇರಿಹೋದಳು.

* * * * *

## ಹೊಸ ಪ್ರಕಟಣೆಗಳು

1. ಬಾಳೆಂಬ ಕಡಲಲ್ಲಿ ಪ್ರೊ. ಗಾಯತ್ರಿಮೂರ್ತಿ ಕಾದಂಬರಿ ರೂ 36
   ಮತ್ತು ಫಲಿತಾಂಶ
೨. ಕಸ್ತೂರಿ ಮೃಗ ಡಾ॥ ಮ.ಸು.ಕೃಷ್ಣಮೂರ್ತಿ ಕಾದಂಬರಿ, ರೂ 45
೩. ಬೆಟ್ಟಕೆ ಚಳಿಯಾದಡೆ,ಡಾ॥ಮ.ಸು.ಕೃಷ್ಣಮೂರ್ತಿ,ಕಥಾಸಂಕಲನ ರೂ 36
೪. ಪುನರಾಗಮನ ಡಾ॥ಮ.ಸು.ಕೃಷ್ಣಮೂರ್ತಿ ಕಥಾಸಂಕಲನ, ರೂ 36
೫. ಕುತೂಹಲ ವಿಜ್ಞಾನ ಡಾ॥ ಎ.ಹೆಚ್.ಶಿವಾನಂದ ವಿಜ್ಞಾನ, ರೂ 45
೬. ಗೀತಾ ತತ್ವಾರ್ಥಸಾರ ಲಕ್ಷ್ಮೀನಾರಾಯಣನ್ ತತ್ವಶಾಸ್ತ್ರ ರೂ 48
೭. ಪ್ರೀತಿಯ ಗೆಲವು ಪ್ರೊ. ಗಾಯತ್ರಿಮೂರ್ತಿ ಮಕ್ಕಳ ಕಾದಂಬರಿ ರೂ 25
೮. ಆಕಾಶಗಂಗೆ ಡಾ॥ ಎ.ಹೆಚ್.ಶಿವಾನಂದ ವಿಜ್ಞಾನ ರೂ 12
೯. ಮಾಹೇಶ್ವರ ಮಹಿಮೆ ಸುಲೋಚನಾ ಶಾಸ್ತ್ರಿ ಧಾರ್ಮಿಕ ರೂ 25
೧೦. ಪ್ರೀತಿವಾಹಿನಿ– ಡಿ ಎಲ್ ನಿಜಯಕುಮಾರಿ ರೂ 48
೧೧. ಜಾನಪದ ಗೀತೆಗಳು ಸುಗಂಧ ರಾಣಿ ರೂ 15
೧೨. ಸಂತ ನರಸೀ ಮೆಹತಾ ಡಾ॥ಮ.ಸು.ಕೃಷ್ಣಮೂರ್ತಿ ರೂ 40
೧೩. ಚತುರ್ಮುಖ ಕಾದಂಬರಿ ಡಾ॥ಮ.ಸು.ಕೃಷ್ಣಮೂರ್ತಿ ರೂ 32
೧೪. ಸಮುದ್ರ ಸಂಗಮ ಡಾ॥ಮ.ಸು.ಕೃಷ್ಣಮೂರ್ತಿ ರೂ 60
೧೫. ಮಧುರ ಮೋಹನ–ಪದ್ಮಾ ಶ್ರೀಧರ್ ರೂ 50
೧೬. ಮುಖವಾಡ–ಪದ್ಮಾ ಶ್ರೀಧರ್ ರೂ 60
೧೭. ಬೇರು ಮುರಿದ ಮರ– ವಿಜಯ ಚಂದ್ರಮೌಳೇಶ್ವರ ರೂ 45
೧೮. ಶುಭೋದಯ– ವಿಜಯ ಚಂದ್ರಮೌಳೇಶ್ವರ ರೂ 20
೧೯. ಅಧ್ಯಾತ್ಮ ವಾಹಿನಿ– ಪ್ರೊ॥ ಡಿ.ಎಲ್.ಪಾಟೀಲ್ ರೂ. 60
೨೦. ಶರಣರ ನಾಟಕಗಳು– ಸಿಂಧೂರಿ ರೂ 20
೨೧. ಭಾವತರಂಗ– ಸಿಂಧೂರಿ ರೂ 20
೨೨. ಎರಡು ಒರಿಯಾ ನಾಟಕಗಳು–ಪರಮೇಶ ರೂ 40
೨೩. ಸೌಂದರ್ಯಮಿಮಾಂಸೆ – ಪ್ರೊ॥ ಡಿ.ಎಲ್.ಪಾಟೀಲ್ ರೂ. 40



ಶ್ರೀಮತಿ **ಪದ್ಮಾ ಶ್ರೀಧರ್** ಅವರ ಈ ಚೊಚ್ಚಲ ಕಾದಂಬರಿ **'ಮಧುರ ಮೋಹನ' 'ಮಂಗಳ'** ವಾರ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಕರ್ನಾಟಕದಾದ್ಯಂತ ಓದುಗರ ಮೆಚ್ಚುಗೆಯನ್ನೂ ಪ್ರಶಂಸೆಯನ್ನೂ ಗಳಿಸಿತು. ಸರಳ ಸುಂದರ ಸನ್ನಿವೇಶಗಳನ್ನೊಳಗೊಂಡ, ಸುಂದರ ಸಾಂಸಾರಿಕ ಚಿತ್ರಣವೆಂದು ಅಭಿಮಾನದಿಂದ ಜನಪ್ರಿಯವಾಯಿತು. ಅದು ಈಗ ಪುಸ್ತಕ ರೂಪದಲ್ಲಿಯೂ ಹೊರಬರುತ್ತಿದೆ.

ಅವರ ಇನ್ನೊಂದು ಕಾದಂಬರಿ **'ಸತ್ಯವಾನನಿಲ್ಲದ ಸಾವಿತ್ರಿ'** ಯು **'ಕನ್ನಡ ಪ್ರಭ'** ದಲ್ಲಿ ಧಾರಾವಾಹಿಯಾಗಿ ಬಂದು, ಪುಸ್ತಕ ರೂಪದಲ್ಲಿಯೂ ಹೊರಬಂದಿದೆ. 'ಮುಖವಾಡ' ಕಾದಂಬರಿ ಇದೀಗ ಪ್ರಕಟಗೊಂಡಿದೆ.

ಅವರ ಇತರ ಕಾದಂಬರಿಗಳು **'ಅನಿರೀಕ್ಷಿತ'**, **'ಚಿತ್ರಾಂಗದೆ'**, **'ಪಥ'**, **'ಆಸರೆ'** ಪ್ರಕಟಣೆಗೆ ಸಿದ್ಧವಾಗುತ್ತಿವೆ.

ಅವರ ಕೆಲವು ಕಥೆಗಳು ಪ್ರಕಟವಾಗಿದ್ದು—ಬಹುಮಾನ ಪಡೆದಿವೆ. ಲೇಖಕಿಯರ ಪರಿಷತ್‌ನವರ ಬಹುಮಾನ ಪಡೆದಿದ್ದಾರೆ.

---

**ಮಂಜುಶ್ರೀ ಪ್ರಕಾಶನ, ಮೈಸೂರು-೯, ರೂ. ೪೮/-**

---

ISBN-81-86675-10-8